# ಸುಲಭ ಚರಣದ ಪದ್ಯಗಳು



ಸಂಪಾದಕ:
**ಜಿ. ವಾಮನ ಭಟ್ಟ**, ಬಿ. ಎ.,
ಕೆನರಾ ಹಾಯ್ ಸ್ಕೂಲ್, ಮಂಗಳೂರು.



ಸರಸ್ವತೀ ಪ್ರಿಂಟಿಂಗ್, ವರ್ಕ್ಸ್ ಲಿಮಿಟೆಡ್, ಮಂಗಳೂರು.

1933



ಆರಾಣೆ.

# ಮೂರು ಮಾತು.

ಮಕ್ಕಳ ಪಠನಕ್ಕೆ ಅವರವರ ವಯೋಮಾನಕ್ಕೆ ಸರಿಯಾಗುವ ಪದ್ಯಗಳು ಕನ್ನಡ ಸಾಹಿತ್ಯದಲ್ಲಿ ವಿರಳವೆನ್ನಬಹುದು. ಪೂರ್ವಕಾಲದ ಕವಿಗಳು ಮಕ್ಕಳಿಗಾಗಿ ಬರೆದ ಪದ್ಯಗಳು ತೀರ ಕಡಮೆ. ಆಧುನಿಕರು ಶಿಶುಸಾಹಿತ್ಯವೆಂದು ಪದ್ಯಗಳನ್ನನೇಕವಾಗಿ ಪ್ರಕಟಿಸುತಿದ್ದರೂ, ಅದಿನ್ನೂ ಸಾಕಾದಂತೆ ಕಾಣುವುದಿಲ್ಲ. ಹಾಗೆಂದು, ನಾವು ನಮ್ಮ ವಿದ್ಯಾರ್ಥಿಗಳಿಗೆ ಲಕ್ಷ್ಮೀಶನೆ ಮೊದಲಾದ ಕವಿಗಳ ಉದ್ಗ್ರಂಥಗಳಿಂದ ಉದ್ಧೃದ್ಧ ಕವಿತೆಗಳನ್ನು ಮಾತ್ರ ಕಲಿಸುತಿರುವುದು ತೀರ ಶೋಚನೀಯವಾಗಿದೆ. ಈಗಿನ ನಮ್ಮ ಬಳಕೆಯಲ್ಲಿರುವ ಭಾಷೆಗೂ ಪೂರ್ವಕಾಲದ ಗ್ರಂಥಗಳ ಭಾಷೆಗೂ ಬಹಳ ವ್ಯತ್ಯಾಸವಿದ್ದು, ನಮ್ಮ ಎಳೆಯ ವಿದ್ಯಾರ್ಥಿಗಳಿಗೆ ಅವುಗಳನ್ನೋದಿ ಸುಖಪಡುವುದು ಕಷ್ಟವೆನಿಸುತ್ತದೆ. ವಿದ್ಯಾಪ್ರಚಾರವು ಹೆಚ್ಚುತ್ತಿರುವ ಕಾಲದಲ್ಲಿ ವಿದ್ಯಾಭ್ಯಾಸವು ಎಳೆಯ ವಯಸ್ಸಿನಲ್ಲಿಯೇ ಪ್ರಾರಂಭವಾಗುತ್ತಿದೆ. ಸೆಕೆಂಡರಿ ತರಗತಿಯ ವಿದ್ಯಾರ್ಥಿಗಳ ಸರಾಸರಿ ಪ್ರಾಯವು ತೀರ ಕಿರಿದಾಗಿರುವುದನ್ನೂ ಅವರ ಮನಸ್ಸಿನ ಕೋಮಲತೆಯನ್ನೂ ಅವರ ಗ್ರಹಣಶಕ್ತಿಯ ಮುಗ್ಧತೆಯನ್ನೂ ವಿಮರ್ಶಿಸಿದರೆ, ಬಳಕೆಯಲ್ಲಿ ಇಲ್ಲದ ಪ್ರಯೋಗಗಳಿರುವ ಪದ್ಯಗಳ ಅಭ್ಯಾಸವು ಅವರಿಗೆ ಸ್ವಭಾವತಃ ಕಷ್ಟಸಾಧ್ಯವಾದ ಸಂಗತಿಯೆಂದು ತೋರದಿರದು. ಹಾಗೆಂದು ಪೂರ್ವಿಕರ ಪದ್ಯಗಳನ್ನು ಸಂಪೂರ್ಣವಾಗಿ ಬದಿಗೆ ದೂಡುವುದೂ ಸಾಧ್ಯವಿಲ್ಲ. ಕಾರಣ, ಈ ವಿದ್ಯಾರ್ಥಿಗಳ ಮುಂದಿನ ಅಭ್ಯಾಸದ ಉಪಲಕ್ಷ್ಯದಲ್ಲಿ ಪೂರ್ವಿಕರ ಪದ್ಯಗಳ ಪರಿಚಯವನ್ನು ಮಾಡಿಕೊಡುವುದು ಒಳ್ಳಿತೆಂದು ತೋರುತ್ತದೆ. ಈ ದೃಷ್ಟಿಯಿಂದ, ಈ ಚಿಕ್ಕ ಸಂಗ್ರಹದಲ್ಲಿ ಆಧುನಿಕರ ಪದ್ಯಗಳೂ ಬಳಕೆಯ ಭಾಷೆಗೆ ವಿಶೇಷ ವ್ಯತ್ಯಾಸವಿಲ್ಲದ ಪೂರ್ವಿಕರ ಪದ್ಯಗಳೂ ಸೇರಿಸಲ್ಪಟ್ಟಿವೆ. ಆಧುನಿಕರ ಪದ್ಯಗಳಲ್ಲಿ ಕೆಲವೊಂದು ತೀರ ಸುಲಭವಾಗಿವೆಯೆಂದು ತೋರಬಹುದು. ಆದರೆ, ನಮ್ಮ ವಿದ್ಯಾರ್ಥಿಗಳ ಪ್ರಾಯವನ್ನು ಮನಸ್ಸಿಗೆ ತಂದುಕೊಂಡರೆ, ಇವುಗಳಿಗಿಂತ ಸುಲಭವಾದ ಪದ್ಯಗಳು ಇದ್ದಿದ್ದರೆ, ಒಳ್ಳಿತಾಗುತಿತ್ತೆಂದು ಖಚಿತವಾಗಬಹುದು.

ಕವಿತೆಯನ್ನು ನಾವು ಮಕ್ಕಳಿಗೆ ಕಲಿಸುತಿರುವುದು, ಅವರಿಗೆ ಗೊಡ್ಡು ಭಾಷಾಜ್ಞಾನವನ್ನು ಮಾಡಿಕೊಡಬೇಕೆಂದಲ್ಲ; ದೊಡ್ಡ ದೊಡ್ಡ ವಿಷಯಗಳನ್ನೆತ್ತಿ, ವಿವರಿಸಿ, ಉಪಾಧ್ಯಾಯನ ವಿವರಣಶಕ್ತಿಯ ಪ್ರದರ್ಶನವನ್ನು ಮಾಡಿಕೊಡಬೇಕೆಂದಲ್ಲ; ಮಕ್ಕಳಲ್ಲಿ ಸೌಂದರ್ಯೋಪಾಸನೆಯ ಶಕ್ತಿಯನ್ನು ಉದ್ದೀಪನಗೊಳಿಸುವುದೇ ಕವಿತಾಶಿಕ್ಷಣದ ಹೆಗ್ಗುರಿಯಾಗಿದೆ. ಯಾವ ಸಾಹಿತ್ಯವನ್ನು ಓದುತ್ತಿರುವರೊ, ಅದರ ಚೆಲುವನ್ನೂ ಸವಿಯನ್ನೂ ತಿಳಿಯಲಿಕ್ಕೆ ಕವಿತಾಶಿಕ್ಷಣವು ಮಕ್ಕಳಿಗೆ ಮುನ್ನುಡಿಯಾಗಿರಬೇಕು. ಆ ಸಾಹಿತ್ಯದ ಶಬ್ದಸೌಷ್ಠವವನ್ನೂ ಅಭಿಪ್ರಾಯವಿಶೇಷತ್ವವನ್ನೂ ಸರಿಯಾಗಿ ತಿಳಿಯಲಿಕ್ಕೆ ಚೆನ್ನಾದ ಉಪೋದ್ಘಾತವನ್ನು ಮಾಡಿಕೊಡಬೇಕು. ಈ ದೃಷ್ಟಿಯಿಂದ, ಕಲಿಸುತಿರುವ ಪದ್ಯಗಳು ಮಕ್ಕಳ ಬುದ್ಧಿಗೂ ಪ್ರಾಯಕ್ಕೂ ಅನು

ರೂಪವಾದುವುಗಳಾಗಿರಬೇಕು. ಅಂತಹ ಪದ್ಯಗಳು ಕಬ್ಬಿಣದ ಕಡಲೆಯಾಗಿರದೆ; ಕಬ್ಬಿನ ಕೋಲಾಗಿರಬೇಕು. ಕಠಿನವಾದ ಶಬ್ದಗಳಿಲ್ಲದೆ, ಹಿಮದಂತೆ ಕರಗಬೇಕು. ಸಂಧಿಸಮಾಸಗಳ ತೊಡಕಿಲ್ಲದೆ, ಬೆಣ್ಣೆಯಂತೆ ನುಣಪಾಗಿರಬೇಕು. ಹಾಗೆ ಅನು ರೂಪವೆಂದು ತೋರಿದ ಪದ್ಯಗಳನ್ನೆ ಕಲಿಸಬೇಕು.

ಕವಿತಾಶಿಕ್ಷಣದಲ್ಲಿ ಪಾಠನವು ಮುಖ್ಯವಾಗಿದೆ. ಕವಿತೆಯು ನಾದಮಯ ಬ್ರಹ್ಮವಾಗಿದೆ. ಪ್ರತಿಯೊಬ್ಬರ ಕಂಠವೂ ಕಿನ್ನರಕಂಠವಾಗಿಲ್ಲದಿದ್ದರೂ ಸಂಗೀತದ ಅಸ್ಪಷ್ಟ ಸಂಸ್ಕಾರವು ಪ್ರತಿಯೊಬ್ಬರಿಗೂ ಇದ್ದೇ ಇದೆ. ಆದುದರಿಂದ, ಉಪಾ ಧ್ಯಾಯನು ಪದ್ಯಗಳನ್ನು ಗಂಭೀರವಾಗಿಯೂ ಧೀರವಾಗಿಯೂ ಹಲವೊಮ್ಮೆ ಓದ ಬೇಕು; ಮಕ್ಕಳಿಂದ ಓದಿಸಬೇಕು. ಆಗ ಕವಿತೆಯ ಝರಿಯು ಬುಗ್ಗೆಬುಗ್ಗೆಯಾಗಿ ಒಸರಿ, ತೊರೆಯಾಗಿ ಹರಿಯಲು ಮೊದಲಾಗುವುದು. ಆದರೆ, ಕನ್ನಡ ಪದ್ಯ ಗಳನ್ನು ನಮ್ಮ ವಿದ್ಯಾರ್ಥಿಗಳು ಪ್ರಕೃತದಲ್ಲಿ ಹೇಳುತ್ತಿರುವ ರೀತಿಯನ್ನು ನೋಡಿ, ಅಂತಹ ರಾಗದಿಂದ ಈ ಪದ್ಯಗಳನ್ನು ಹೇಳಿಸದಿರುವುದೇ ಉತ್ತಮವೆಂದು ನನಗಾ ಗಾಗ ಅನ್ನಿಸುತ್ತದೆ. ರಾಗದಿಂದ ಹೇಳುವ ಪದ್ಧತಿಯನ್ನೆ ಸಂಪೂರ್ಣವಾಗಿ ಕಿತ್ತೊಗೆಯುವುದು ಒಳ್ಳಿತೆಂದು, ಕೆಲವೊಮ್ಮೆ ತೋರುತ್ತದೆ. ಓದಲಿಕ್ಕೊ ಬಾರದ ಪದ್ಯಗಳನ್ನು ಮಕ್ಕಳಿಂದ ಕಿವಿಗಿಂಪಾಗುವಂತೆ ರಾಗದಿಂದ ಹಾಡಿಸಿ 'ಹಾ' ಎಂದು ಕೇಳಬಹುದು. ಆದರೆ, ಮಕ್ಕಳು ಈ ನಮ್ಮ ಷಟ್ಪದಿಗಳನ್ನು ಹಾಡುತ್ತಿರುವಾಗ ನಮ್ಮ ಕಿವಿಯಲ್ಲಿ ಪ್ರತಿಧ್ವನಿಯನ್ನು ಕೊಡುತ್ತಿರುವುದು ಕವಿತೆಯಲ್ಲ; ಕವಿಯ ಭಾವಗಳಲ್ಲ. ವಿದ್ಯಾರ್ಥಿಯಲ್ಲಿ ಅಸ್ಪಷ್ಟವಾಗಿ ಹುದುಗಿರುವ ನಾದಮಯಬ್ರಹ್ಮನ ಕೂಗು, ಅಳುವು, ರೋದನವು! ಒಮ್ಮೆ ನನ್ನ ಸ್ನೇಹಿತರೊಬ್ಬರು, ಕನ್ನಡ ಪದ್ಯದ ಮಾದರಿಯೊಂದನ್ನು ನೆನಪಿನ ಗುಹೆಯಿಂದ ಆಯ್ದು ಹಾಡಿದರು. ಕೇಳಿ ನನಗೆ ಒಮ್ಮೆಲೆ ನಾಚಿಕೆಯೂ ದುಃಖವೂ ಉಂಟಾಯಿತು. ಅದನ್ನವರು ಸಣ್ಣ ಪ್ರಾಯ ದಲ್ಲಿ ಕಲಿತ ಪದ್ಯವಂತೆ; ನೆನಪಿನಲ್ಲಿ ಉಳಿದುದು ಸಿರಿಗನ್ನಡದ ಗೆಲುವಂತೆ; ನಳ ರಾಜನ ಕಥೆಯಂತೆ; ತೊರವೆಯರಸನ ಪ್ರಸಾದವಂತೆ; ಅದನ್ನಿಲ್ಲಿ ಬರೆಯುತಿರು ವುದು ನಮ್ಮ 'ಬರಹ'ವಂತೆ — ಏತ, ರಾಯಾ! ಸವಿದು; ಜಗದ್ವಿ— ಖ್ಯಾತನಲ್ಲಾ ರಾಯರಲಿ? ಸಾಕು, ನಾವು ಮಾವಿನ ಮಿಡಿಯನ್ನೆ ಜಡಿದು ಸುಣ್ಣ ತಾಗಿಸಿ, ಹಣ್ಣು ಮಾಡುತಿದ್ದೇವೆ — ಮಾಡಿದ್ದೇವೆ.

ಈ ದೃಷ್ಟಿಯಿಂದ, ಕನ್ನಡ ಪದ್ಯಗಳನ್ನು ಸಾಂಪ್ರದಾಯಿಕ ರೀತಿಯ ರಾಗದಿಂದ ಹೇಳಿಸಬೇಕೇ, ಗದ್ಯವನ್ನು ಓದಿದಂತೆಯೆ ಸ್ವಲ್ಪ ಹೆಚ್ಚು ಗಂಭೀರವಾಗಿ ಪದ್ಯವನ್ನು ಓದಬೇಕೇ ಎಂಬುದಿನ್ನೂ ನನಗೆ ಸ್ಪಷ್ಟವಾಗಿಲ್ಲ. ಸಾಂಪ್ರದಾಯಿಕ ರೀತಿಯನ್ನು ಸಂಪೂರ್ಣವಾಗಿ ಕಿತ್ತೊಗೆಯಬೇಕೆಂದು ನಾನು ಹೇಳುವುದಿಲ್ಲ. ಆದರೆ, ಈಗಿನ ಪದ್ಧತಿಯಿಂದ ಮಕ್ಕಳ ಉಚ್ಚಾರವು ಹಾಳಾಗುತಿದೆಯೆಂಬುದು ಅನುಭವಸಿದ್ಧ ವಾಗಿದೆಯೆಂದು ಹೇಳಬಲ್ಲೆ. ಮತ್ತು ಉಪಾಧ್ಯಾಯನು ಕಲಿಸಿದ ಸಮಸ್ತ ಪದ್ಯ ಗಳನ್ನು ಮಕ್ಕಳಿಂದ ಬಾಯ್ಪಾಟ ಮಾಡಿಸದೇ, ಕಲಿಸುತಿರುವ ಪದ್ಯಪಾಠವು ಆದಷ್ಟು

ಚಿಕ್ಕದಿದ್ದು, ಕ್ಲಿಷ್ಟ ಪದಗಳ ಗೊಂದಲವು ಕಡಿಮೆಯಿದ್ದು, ಸಂಧಿ ಸಮಾಸಗಳ ಉಪಟಳವು ಕ್ಷುದ್ರವಾಗಿದ್ದು ಶೈಲಿಯು ಸರಳವಿದ್ದು, ಭಾವನೆಯು ಹೃದಯಂಗಮ ವಾಗಿದ್ದರೆ, ಅವುಗಳನ್ನು ಕಂಠಪಾಠ ಮಾಡಿಸಬೇಕೇ ವಿನಾ, ಪ್ರತಿಯೊಂದು ಪದ್ಯವೂ ಬಾಯ್ಪಾಟವಿರಬೇಕೆಂದು ಒತ್ತಾಯಪಡಿಸಿ ಅಬದ್ಧವಾಗಿ ಹಾಡಿಸಿ, ನಂತರ ಕವಿತಾ ಶಿಕ್ಷಣದ ಹೆಗ್ಗುರಿಯು ಬಾಯ್ಪಾಟವೇ ಸರಿಯೆಂದು ಮಕ್ಕಳು ತಿಳಿಯದಂತೆ ಜಾಗ್ರತೆ ಮಾಡಬೇಕಾಗಿದೆ, ಎಂಬುದಿಂತಿಷ್ಟೆ ಸೂಚಿಸಬಲ್ಲೆ.

ಪದ್ಯವನ್ನು ಹಲವೊಮ್ಮೆ ಓದಿದ ನಂತರ, ಸಂಧಿಗಳನ್ನು ಒಡೆದು, ಪದ್ಯಗಳನ್ನು ಹಾಡುವುದುತ್ತಮ. ಹಾಗೆ ಹಾಡಿದರೆ, ಛಂದೋಭಂಗವಾಗಬಹುದೆಂದು ಕೆಲವರು ಆಕ್ಷೇಪಿಸಬಹುದು; ಆದರೆ, ಹಾಗೆ ವಿಶೇಷ ದೋಷವು ಉಂಟಾಗಬಹುದೆಂದು ನಾನೆಣಿಸುವುದಿಲ್ಲ. ಅದೆಲ್ಲವೂ ಹೆಚ್ಚಾಗಿ ಉಪಾಧ್ಯಾಯನ ಮೇಲೆ ಹೊಂದಿರುತ್ತದೆ. ವಾಚನದಿಂದ ಬುಗ್ಗೆಗಳೊಸರಿ, ತೊರೆ ಹರಿಯುವಾಗ ಉಪಾಧ್ಯಾಯನು ನೀರು ಕಲುಷಿತವಾಗದಂತೆ ನೋಡಿಕೊಳ್ಳಬೇಕು. ಒಂದೊಂದೆ ಚರಣವನ್ನು ತೆಗೆದು, ಅಲ್ಲಿಯ ಗುರು ಲಾಘವವನ್ನು ತೋರಿಸಿ, ತತ್ಸಮ ತದ್ಭವ ಶಬ್ದಗಳನ್ನು ಅಂಕಿಸಿ, ಪದಪದಕ್ಕೆ ಅರ್ಥವನ್ನು ಬರೆಯಿಸಿಕೊಟ್ಟು, ಸಂಧಿಗಳನ್ನು ಬಿಚ್ಚಿಕೊಟ್ಟು, ಸರಳಾನು ವಾದವನ್ನು ನಾಲ್ಕೈದು ವಿದ್ಯಾರ್ಥಿಗಳಿಂದ ಹೇಳಿಸಿ, ಸಮಯವಿನ್ನೂ ಮುಗಿದಿಲ್ಲ ವೆಂದು ದಂಡಾನ್ವಯದ ದಂಡವನ್ನೂ ಹೊತ್ತು, ಕವಿತೆಯನ್ನು ಕೊಲ್ಲುವುದಕ್ಕಿಂತ, ಕವಿತೆಯ ಕೊರಳನ್ನೆ ಮುರಿಯುವುದಕ್ಕಿಂತ, ಕವಿತೆಯನ್ನು ಕಲಿಸದಿರುವುದೇ ಲೇಸು. ನೆಟ್ಟಗೆ ಕವಿತೆಯ ಹೃದಯವನ್ನೆ ತಿಳಿಸಿ, ಅದರಲ್ಲಿರುವ ಪ್ರತಿಯೊಂದು ಶಬ್ದವು, ಸಮಾಸವು, ಸಂಧಿಯು, ಕವಿತೆಯ ಸೌಂದರ್ಯವನ್ನು ಹೆಚ್ಚಿಸುವುದ ರಲ್ಲಿ ಹೇಗೆ ಸಹಕಾರಿಗಳಾಗಿವೆಯೆಂಬುದನ್ನು ಪ್ರೇಮಮಯವೂ ಗಂಭೀರವೂ ಆದ ಸ್ವರದಿಂದ ಹೇಳಿ, ಮಕ್ಕಳಲ್ಲಿಯೂ ತನ್ನಲ್ಲಿಯೂ ಅವೊಂದು ಕ್ಷಣದಲ್ಲಿ ಅನಿರ್ವಚನೀಯವಾದ ಐಕ್ಯವನ್ನು ಸ್ಥಾಪಿಸಿ, ಶಾಂತಿವಾತಾವರಣದ ತಂಪನ್ನು ಅನುಭವಿಸುವಾಗ, ಮಕ್ಕಳ ಕಣ್ಣುಗಳು ಹೊಳೆದು ವಿಸ್ತಾರವಾದುದನ್ನು ಕಂಡು, ಯಾವನು ಪವಿತ್ರನಾಗಲಿಕ್ಕಿಲ್ಲ! ಯಾವ ಸಾಹಿತ್ಯವು, ಯಾವ ವಾಙ್ಮಯವು ಧನ್ಯ ವಾಗಲಿಕ್ಕಿಲ್ಲ!! ಇಲ್ಲವೆ, ಕವಿತೆಯ ಗಿರಿಯು ವಸಂತನ ಬೀಡಾಗಿ ಮರಗಿಡಗಳು ತಳಿರಿಟ್ಟು, ನನೆಯೆಲ್ಲ ಹೂವಾಗಿ, ಹಕ್ಕಿಗಳ ನುಣ್ಚರವು ನಾವು ಲೋಕವನ್ನು ಮರೆ ಯುವಂತೆ ಮಾಡುವುದು. ಅಥವಾ ಕವಿತೆಯ ಬೆಟ್ಟವು ಬುಗ್ಗೆಬುಗ್ಗೆಯಾಗಿ ಒಸರಿ ಜಾಹ್ನವಿಯಾಗಿ ಹರಿದು ಭಯಭಕ್ತಿಯು ನಮ್ಮ ಆತ್ಮವನ್ನು ಪಾವನಗೊಳಿಸುವುದು; ಅಥವಾ ಕವಿತೆಯ ಪರ್ವತವು ಚೂರುಚೂರಾಗಿ ಸಿಡಿದು, ಜ್ವಾಲಾಮುಖಿಯಾಗಿ ನಮ್ಮ ಕ್ಲೈಬ್ಯವನ್ನೂ ಪಾಪವನ್ನೂ ಉರುಳಿಸುವುದು. ಅದೀಗ ಕವಿತೆಯ ಮೇಲ್ಮೆ; ಅದೀಗ ಸಾಹಿತ್ಯದ ಗುಟ್ಟು.

"ಮಕ್ಕಳಿಗಾಗಿ ಹುಟ್ಟುವ ಕವನಗಳಲ್ಲಿ ಎರಡು ಜಾತಿಗಳನ್ನು ವಿಂಗಡಿಸ ಬಹುದು. ಕವಿ, ತಾನೂ ಮಗುವಾಗಿ, ಅದರ ದೃಷ್ಟಿಯಿಂದ ಸಂಗತಿಗಳನ್ನು ನೋಡಿ ಅದಕ್ಕೆ ತಿಳಿಯುವ ಭಾಷೆಯಲ್ಲಿ ಅದರ ಹೃದಯಕ್ಕೆ ಮುಟ್ಟುವಂತೆ ಬರೆದ

ಕವನಗಳು ಒಂದು ಜಾತಿ. ಇವನ್ನು ಬರೆಯುವಾಗ ಕವಿಯು ಕಲ್ಪನೆ ಮಗುವಿನ ಕಲ್ಪನೆಯಂತೆಯೆ ತಿಳಿಯಾಗಬೇಕು. ಮನಸ್ಸು ಮಗುವಿನ ಮನಸ್ಸಿನಂತೆಯೆ ಕೌತುಕ ಪೂರ್ಣವಾಗಬೇಕು . . . . . . ಇನ್ನೊಂದು ಜಾತಿಯ ಪದ್ಯಗಳಲ್ಲಿ ಮಕ್ಕಳನ್ನು ಉಲ್ಲಾಸಪಡಿಸುವುದರ ಜೊತೆಗೆ ಅದರ ಮೂಲಕ ವಿಷಯಜ್ಞಾನವನ್ನಾಗಲಿ, ನೀತಿಬೋಧೆಯನ್ನಾಗಲಿ ಮಾಡಿಕೊಡಬೇಕೆಂಬ ಉದ್ದೇಶವೂ ಇರುತ್ತದೆ.'' ಇದರ ಪ್ರಕಾರ,

> ಗೆಳೆಯರು ಆಡುವರಾರೂ ಇಲ್ಲ;
> ಕಳೆಯುವುದೆಂತೀ ಕಾಲವನೆಲ್ಲ.

ಎಂಬುದೂ

> ತಿನಿಸನು ನೀ ಕೊಡು ಹಸಿದಿಹ ಮರಿಗೆ
> ಮೊಲೆಗಳನುಣ್ಣಿಸು ಮುದ್ದಿನ ಮರಿಗೆ.

ಎಂಬುದೂ, ಕೇವಲ ಬಾಲಕರ ತೊದಲ್ನುಡಿಗಳು; ಅವರ ಮನಸ್ಸಿನ ಕೌತುಕವು. ಎರಡನೇ ಜಾತಿಗೆ ಸೇರಿದ ಪದ್ಯಗಳೂ ಇರುವುವು. ಕತ್ತೆ, ಪರಮೆ, ಇವುಗಳನ್ನು ಉದಾಹರಿಸಬಹುದು.

ಪೂರ್ವಿಕರ ಪದ್ಯಗಳನೇಕವು ಕಥಾರೂಪವಾಗಿವೆ. ವಿದ್ಯಾರ್ಥಿಗಳಿಗೆ ಹಳಗನ್ನಡದ ಪರಿಚಯವಮಾಡಿಕೊಡುವುದಕ್ಕಾಗಿ ಇವುಗಳನ್ನು ಸೇರಿಸಿರುವುದರಿಂದ, ಇವುಗಳನ್ನು ಹುಡುಗರಿಂದ ಬಾಯ್ಪಾಟಮಾಡಿಸುವ ಗೋಜಿಗೆ ಹೋಗದೆ, ಹೀಗೆಯೇ ಓದಿಸಿ ಕಲಿಸಿದರೆ, ಯಥೇಷ್ಟವಾಗಬಹುದು.

ಈ ಚಿಕ್ಕ ಸಂಗ್ರಹದಲ್ಲಿ ತಮ್ಮ ಅಧಿಕಾರಕ್ಕೊಳಪಟ್ಟ ಮತ್ತು ತಮ್ಮ ಬರೆವಣಿಗೆಯ ಪದ್ಯಗಳನ್ನು ಪ್ರಕಟಿಸಲಿಕ್ಕೆ ಅನುಮತಿಯನ್ನಿತ್ತ—ಮೈಸೂರಿನ ಮಹಾರಾಜಾ ಕೊಲೇಜಿನ ಕರ್ಣಾಟಕ ಸಂಘದ ಅಧಿಕಾರಿಗಳು, ಧಾರವಾಡದ ಕರ್ಣಾಟಕ ಸಾಹಿತ್ಯ ಮಂದಿರ, ಮಂಗಳೂರಿನ ಬಾಲಸಾಹಿತ್ಯ ಮಂಡಲ, ಮಂಗಳೂರು ಮಿತ್ರ ಮಂಡಲಿ, ಶ್ರೀ। ಕೆ. ವಿ. ಪುಟ್ಟಪ್ಪ, ಎಮ್. ಎ, ಶ್ರೀ। ಮಧುರಚೆನ್ನ, ಹಲಸಂಗಿ, ಶ್ರೀ। ಗೋವಿಂದ ಪೈ,ಮಂಜೇಶ್ವರ, ಶ್ರೀ। ಕಡೆಂಗೋಡ್ಲು ಶಂಕರ ಭಟ್ಟ, ವಿದ್ವಾನ್, ಶ್ರೀ। ಕೆ. ರಾಘುವಾಚಾರ್, ರಾಷ್ಟ್ರಭಾಷಾ ವಿಶಾರದ, ಶ್ರೀ। ಪೇಜಾವರ ಸದಾಶಿವರಾವ್, ಶ್ರೀ। ಉದ್ಯಾವರ ಬಾಲಕೃಷ್ಣರಾವ್, ಮತ್ತು ಶ್ರೀ। ಮೂಲ್ಕಿ ಸೀತಾರಾಮ ಕಾಮತ್, ಬಿ. ಎ., ಇವರಿಗೆ ನಾನು ತುಂಬಾ ಋಣಿಯಾಗಿರುತ್ತೇನೆ. ಈ ಮಹನೀಯರ ಉದಾರವಾದ ಆಶ್ರಯದಿಂದಲೆ, ಚಿಕ್ಕ ಮಕ್ಕಳಿಗೆ ಸೌಕರ್ಯವೊಂದನ್ನು ಒದಗಿಸಲು ಸಾಧ್ಯವಾಯಿತೆಂದು ತುಂಬಾ ಸಂತೋಷಪಡುತಿದ್ದೇನೆ. ಇನ್ನು, ನಮ್ಮ ಜಿಲ್ಲೆಯ ಸಣ್ಣ ಮಕ್ಕಳ ವಿಷಯದಲ್ಲಿ ಇರುವ ಹಲವು ತೊಡಕುಗಳನ್ನು ನಿವಾರಿಸಲಿಕ್ಕೆ ಇತೋಪ್ಯತಿಶಯವಾಗಿ ತನುಮನ ಧನವುಳ್ಳವರು ಪ್ರಯತ್ನಿಸಲೆಂದೇ ಹಾರೈಸುತ್ತೇನೆ.

ಮಿತ್ರಮಂಡಲಿ, ಮಂಗಳೂರು,
1—12—1933.

**ಜೆ. ವಾಮನ ಭಟ್ಟ.**

# ಕವನಗಳ ವಿವರ

## ಪ್ರಥಮ ಭಾಗ.

## ದ್ವಿತೀಯ ಭಾಗ.

# I. ಗಿಡುಗಾ, ಗಿಡುಗಾ!

ಗಿಡುಗಾ, ಗಿಡುಗಾ! ರೆಕ್ಕೆಯ ಬಿಡಿಸು;
ಬಿಡಿಸಿದ ರೆಕ್ಕೆಯ ಬಡೆಯುತ ಹಾರು;
ಹಾರುತ ದೂರಕೆ ಕಾಣದೆ ಹೋಗು—
ಗಿಡುಗಾ, ಗಿಡುಗಾ! ರೆಕ್ಕೆಯ ಬಿಡಿಸು.

ಕಡಲಿನ ಕೊನೆಯಲಿ ಮುಗಿಲಿನ ಮರೆಗೆ
ಇರುತಿಹ ನಿನ್ನಯ ಗೂಡಿನ ಒಳಗೆ—
ತಿನಿಸನು ನೀ ಕೊಡು ಹಸಿದಿಹ ಮರಿಗೆ,
ಮೊಲೆಗಳನುಣ್ಣಿಸು ಮುದ್ದಿನ ಮರಿಗೆ.

ಕಡಲಿನ ತೆರೆಯಲಿ ಹಾರುತ ಬಿದ್ದು
ತೇಲುವ ತೆಪ್ಪದ ಮೇಲಕೆ ಕುಳಿತು,
ಬರುವೆನು ನಿನ್ನಯ ದೂರದ ಮನೆಗೆ—
ಕೈಯೊಳಗೀಯಲು ಹಣವನು ಮರಿಗೆ.

ಗಿಡುಗಾ, ಗಿಡುಗಾ! ರೆಕ್ಕೆಯ ಬಿಡಿಸು;
ಬಿಡಿಸಿದ ರೆಕ್ಕೆಯ ಬಡೆಯುತ ಹಾರು;
ಹಾರುತ ದೂರಕೆ ಕಾಣದೆ ಹೋಗು—
ಗಿಡುಗಾ, ಗಿಡುಗಾ! ರೆಕ್ಕೆಯ ಬಿಡಿಸು.

---

## II. ತೆಂಗು.

ಉದ್ದ, ಬಹಳುದ್ದ, ಬೆಳೆದಿಹುದು ತೆಂಗು
ಭೇದಿಸುತ ಬಾಂದಳವ ಸರಿನೆಟ್ಟ ನಿಂತು.
ನೀನಷ್ಟು ಎತ್ತರದ ಮರವಯ್ಯ, ತೆಂಗೆ!
ನಾನಿಷ್ಟು ಕುಳ್ಳಾದ ನರನಯ್ಯ, ಮರವೆ!

ಮಳೆಗಾಳಿ ಹೊಡೆತಕ್ಕೆ ಎದೆಯೊಡ್ಡಿ ನಿಂತು,
ಚಳಿಬಿಸಿಲ ಮರೆಯುತ್ತ ನೀ ಬೆಳೆದಿಯಂತೆ!
ಮಳೆಗಾಳಿ ಚಳಿಬಿಸಿಲುಗಳಿಗೆಲ್ಲ ಸೋತು,
ಸೋಜಿಗದ ಮನೆಮಠವ ನಾ ಕಟ್ಟಿ ನಿಂತೆ!

ಎರಡೆರಡು ಗರಿಯಿದ್ದು ಹಾರುತಿದೆ ಹಕ್ಕಿ;
ಕುಣಿಯುತಿದೆ ಅತ್ಯಲ್ಪ ಸೋಗೆಗಳ ನವಿಲು.
ಇಪ್ಪತ್ತು ಗರಿಯಿದ್ದು ನೀ ಹಾರಲಾರೆ!
ಉದ್ದಸೋಗೆಗಳಿದ್ದು ನೀ ಕುಣಿಯಲಾರೆ!!

ನನ್ನಂತೆ ಕೊಳಲೂದಿ ಪದಹಾಡಲಾರೆ,
ನಿನ್ನಂತೆ ಗಾಳಿಯಲಿ ನಾ ತೊನೆಯಲೊಲ್ಲೆ.
ನನ್ನಂತೆ ಜನಕೆ ನೀನುಪಕರಿಸಬಲ್ಲೆ,
ನಿನ್ನಂತೆ ಕಾಯ್ಗಳನು ನಾನು ಕೊಡಲೊಲ್ಲೆ.

## III. ಚಿಟ್ಟೆ.

ಹೂಗಳಿಗೆ ಮುದ್ದೊಂದು—ನಿನಗೊಂದು ಗುಟ್ಟು;
ಆ ಮೇಲೆ ಹೋಗುವೆನು ತೋಟವನು ಬಿಟ್ಟು.
ಎಂದೆಂದ ಎಲೆ ಚಿಟ್ಟೆ! ಬಳಿ ಹಾದು ನೀನು
ಗುಟ್ಟನ್ನು ಹೇಳದೆನೆ ನೆಗೆಯುತಿಹೆ, ಏನು?

ಗಿಡಬಳ್ಳಿ ಬಳುಕುತಿದೆ ನಿನ್ನಾಟದಿಂದ.
ಸಾಕಿನ್ನು, ನೀ ಹೋಗು. ಬಾ, ನೀನು ಬಳಿಕ.
ಗುಟ್ಟನ್ನು ಹೇಳಲಿಕೆ ನೀ ಬಂದೆಯೇನು?
ಬಾ ಬೇಗ ಹೇಳಿಕೆಯ ಹೇಳಿಬಿಡು ನೀನು.

ಈ ಗುಟ್ಟು—ಗೊತ್ತಾಯ್ತು—ನಂಬಿಕೆಯ ಮಾತು
ಆರಾರು ಕೇಳಿದರು ನಾ ಹೇಳಲಾರೆ.
ನಿನ್ನಾಸೆ ಮುಗಿವನಕ ತೋಟದಲಿ ಹಾರು!
ನಾ ನಿನಗೆ ಆತಂಕವನು ಮಾಡಲಾರೆ.

## IV. ಮೇವು.

ಹಸುಮೇಕೆ! ಸಾಕಿನ್ನು, ಸಾಕಿನ್ನು ಮೇವು.
ಮುಚ್ಚಂಜೆಯಾಗುತ್ತ ಬಳಿಗೈದಿತು.
ಭೀಕರದ ಕತ್ತಲೆಯು ಕವಿಯುತಿಹುದೀಗ,
ಹಿಂತೆರಳಿ ಮನೆಯತ್ತ ನೀವು ಬೇಗ.

ಹಾಲುಳ್ಳ ಹಸು, ತಾಯೆ! ಬಾರಿಲ್ಲಿ, ನೋಡು—
ಬಳಬಳಲಿ ಮಲಗಿಹುದು ನಿನ್ನ ಕರುವು.
ತೋಳತಕ್ಕೆಯಲೆನ್ನ ಕೂರುತಿದೆ, ಮೇಕೆ!
ನಿನ್ನ ಮರಿ. ಮೊಲೆಯುಣಿಸೆ, ಬೇಗ ಬಾರೆ!

ಕತ್ತೆಗಳು ನೀವೆಂದು ಹೇಳ್ಯಾರು ಮತ್ತೆ—
ಕತ್ತೆ ಮೇದಲ್ಲಿ ಮೇವಿಲ್ಲವಂತೆ.
ಮತ್ತೊಂದು ತೋಟಕ್ಕೆ ಹೋಗುವೆವು ನಾಳೆ—
ಎಳೆಹುಲ್ಲು ಬೆಳೆಯುತಿರಲಿಲ್ಲಿ ಮತ್ತೆ.

ಹಸುಮೇಕೆ! ಸಾಕಿನ್ನು, ಸಾಕಿನ್ನು ಮೇವು.
ಮುಚ್ಚಂಜೆಯಾಗುತ್ತ ಬಳಿಗೈದಿತು.
ಭೀಕರದ ಕತ್ತಲೆಯು ಕವಿಯುತಿಹುದೀಗ,
ಹಿಂತೆರಳಿ ಮನೆಯತ್ತ ನೀವು ಬೇಗ.

---

## V. ಕತ್ತೆ.

ಕತ್ತೆ, ಕತ್ತೆಯೆನುತ್ತೆ ಹಳಿವರ್ಶೆ ಮಾನವರು
ಕತ್ತೆಯಾ ಕೆಲಸಗಳ ಸವಿಯನುಣುತೆ.
ಸತ್ಯವಿದು ನೋಡಿದರೆ ಮನುಜರಂತಹರೆಲ್ಲ
ಕತ್ತೆಗಳು ರೂಢಿಪದದರ್ಥವರು.

ಕತ್ತೆಯಾ ಗಾನಕ್ಕೆ ಗಾದೆಗಟ್ಟಿಹರವರು,
ನಿತ್ಯವಣಗಿಸಿ ಹಾಸ್ಯವಾಳ್ಪರವರು.
ಮೊತ್ತಮೊದಲಾವನುಂ ಸಂಗೀತ ಶಾಸ್ತ್ರಜ್ಞ
ಎತ್ತಲಾಗಿಹನು? ಬಡಿವಾರವೇಕೆ?

'ಹಿಡಿದ ಕೆಲಸವ ಬಿಡದೆ ಹಟತೊಟ್ಟು ಸಾಧಿಸುತೆ
ಕುಡಿಮುಟ್ಟಿಸುವುದು' ಹಿತವಚನವಿದನು
ಪೊಡವಿಗರಿಪುದು ಕತ್ತೆ ಲೋಕನಾಯಕನಂತೆ
ನುಡಿಯೊಳೀ 'ಕತ್ತೆ ಮೇದಲ್ಲಿ ಮೇವಿಲ್ಲ.'

ಮುಂಜಾನೆಯೆಂಬ ಮುಗುಳರಳಿ ಮೂಡುವ ಮುನ್ನ,
ಹುಂಜ ಕೆಲೆಯುವ ಮುನ್ನ ನಿನ್ನ ಕೂಗು,
ಅಂಜವೆಯೆ ನಿದ್ರಿಸುವ ಲೋಕವನು ಕರೆಯುವುದು!
ಅಂಜಲೇತಕೊ? ಲೋಕಸಖನು ನೀನು.

ಕತ್ತೆಯೆಂಬುವ ಪೆಸರನ್ನೆತ್ತಿ ಕರೆಯೆನು ನಿನ್ನ;
ಕತ್ತೆಯಲ್ಲೈ ನೀನು ಕಾಮಧೇನು.
ಇತ್ತೆ 'ಅಗಸನ ಕುದುರೆ', 'ಕೆಂಪಾಂಬುಧಿಪ'ನೆಂಬ
ಉತ್ತಮೋತ್ತಮ ನಾಮಧೇಯ ನಿನಗೆ.

ಲೋಕದೀ ಪೇಳಿಕೆಗೆ ಕೇಳಿಕೆಗೆ ಬೆದರದೆಯೆ
ನೂಕು ಜೀವನರಥವ ಮುಂದು ಮುಂದು.
ಸಾಕು. ದಿನವೊಂದರಳಿ ನಿನ್ನ ಬಳಿ ಸೇರುವುದು;
ನಾಕಲೋಕದನಂತ ಸುಖವ ಪಡೆವೆ.

---

## VI. ತಾಯಿ.

ಬೆಳಗಿನಲಿ, ಬೈಗಿನಲಿ,
ಅಳುವಿನಲಿ, ನಲವಿನಲಿ,
ತಿಳಿವಿನಲಿ, ಮಬ್ಬಿನಲಿ, ನೀನೆ ತಾಯಿ!
ಒಳಗಿರುವೆ, ಹೊರಗಿರುವೆ,
ಬಳಿಯಿರುವೆ, ಬದಿಗಿರುವೆ,
ಸೆಳೆದು ಬಿಗಿದಪ್ಪಿರುವೆ, ನೀನೆ ತಾಯಿ!

ನಿನ್ನ ನೋಟದ ಸಲ್ಮೆ,
ನಿನ್ನ ಮಾತಿನ ಪ್ರೈಮೆ,
ಎನ್ನ ಬದುಕಾಗಿಹುದು ಜೀವನದಲಿ!
ನಿನ್ನ ಧ್ಯಾನದಿ ಮನವ,
ನಿನ್ನ ಕಾರ್ಯದಿ ತನುವ
ಪುಣ್ಯಗೊಳಿಸುತ ಬಾಳುವೆಯು ಬೆಳಗಲಿ!

ನಲ್ಲೆಯರ ನಗುವೇನು?
ಹುಲ್ಲ ಮೇಲ್ಪನಿಯೇನು?
ಬಿಲ್ಲು ಬಾನಿನ ಮೇಲೆ ಬಾಗಲೇನು?
ಲಲ್ಲೆ ಮಾತಿನೊಳೆನ್ನ
ಗಲ್ಲವನು ಮುದ್ದಿಸುವ
ಮೆಲ್ಲೆದೆಯ ಮಾತೆಗೆಣೆಯುಂಟೆ ಜಗದಿ?

---

## VII. ಬಣ್ಣದ ಚುಕ್ಕಿ.

ಹಕ್ಕಿ, ಹಕ್ಕಿ, ಹಾರುವ ಹಕ್ಕಿ,
ಬಾರೆಲೆ ಹಕ್ಕಿ, ಬಣ್ಣದ ಚುಕ್ಕಿ!

ಗೆಳೆಯರು ಆಡುವರಾರೂ ಇಲ್ಲ;
ಕಳೆಯುವುದೆಂತೀ ಕಾಲವನೆಲ್ಲ?
ಬಾ, ಬಾ, ನನಗೂ ಹಾಡಲು ಕಲಿಸು.
ಬಾ, ಬಾ, ನನಗೂ ಹಾರಲು ಕಲಿಸು.
ಹೂವಿನ ರಸವನು ಕೊಡುವೆನು ನಿನಗೆ.
ಸುಗ್ಗಿಯ ಕಾಳನು ಸುರಿವೆನು ನಿನಗೆ.
ಬಾ, ಬಾ, ಆಡುವ ಹಗಲೆಲ್ಲ!
ಬಾ, ಬಾ, ಹಾಡುವ ದಿನವೆಲ್ಲ!

ಪಡುವಣದೆಸೆಯೊಳು ಬೈಗಿನ ಹೊತ್ತು
ಮುಳುಗುವ ಸಮಯದಿ, ತಾಯಿಯ ಮುತ್ತು
ನನ್ನನು ಮನೆಯೆಡೆಗೆಳೆಯುವುದು.
ಕಾಡಿನ ಬಳಿಯಲಿ, ನಿನ್ನನು ಹೆತ್ತು
ಪೊರೆದಾ ತಾಯಿಯ ಗುಟುಕಿನ ತುತ್ತು
ನಿನ್ನನು ಗೂಡಿಗೆ ಸೆಳೆಯುವುದು!
ಅಲ್ಲಿಯ ವರೆಗೂ ಆಡುವ, ಬಾ!
ಅಲ್ಲಿಯ ವರೆಗೂ ಹಾಡುವ, ಬಾ!

ಹಣ್ಣನು ತಿನ್ನುತ, ಬನದೊಳು ತಿರುಗುತ
ಹೂವಿನ, ತಳಿರಿನ ಸೊಬಗನು ನೋಡುತ,
ತಿಳಿಗೊಳದಲಿ ತಣ್ಣೀರನು ಕುಡಿಯುತ
ನಲಿಯುವ ಹಸುರೊಳು ಬೀಳುತ, ಏಳುತ,
ಅಲ್ಲಿಯ ವರೆಗೂ ಆಡುವ, ಬಾ!
ಅಲ್ಲಿಯ ವರೆಗೂ ಹಾಡುವ, ಬಾ!
ಹಕ್ಕಿ, ಹಕ್ಕಿ, ಹಾರುವ ಹಕ್ಕಿ,
ಬಾರೆಲೆ ಹಕ್ಕಿ, ಬಣ್ಣದ ಚುಕ್ಕಿ!

## VIII. ನೆನಹು.

ನಲಿಯುತ, ಒಲಿಯುತ,
ಮನೆಯನು ಬೆಳಗುತ,
ಒಲುಮೆಯನಿತ್ತಿಹೆ ಸೋದರಿಯೆ ।
ನಿನ್ನಯ ವಿರಹದ
ವ್ಯಥೆಯನು ಸಹಿಸುತ
ಎಂತಿಹೆನೆಂಬುದ ನಾನರಿಯೆ ॥

ಕತ್ತಲೆ ಕಡಲಲಿ
ಎನ್ನನು ಕೆಡಹುತ
ಕಾಲನ ತಕ್ಕೆಯ ಸೇರಿದೆಯಾ? ।
ಜೀವನಬಂಧದ
ಮೋಚನೆಗಾಗಿಯೆ
ಸಾವಿನ ಸೇತುವೆ ದಾಟಿದೆಯಾ? ॥

ಗಗನದಿ ಶೋಭನ
ನಾಟ್ಯವನೆಸಗುವ
ಮುಗಿಲನು ನೆನಪಿಗೆ ತರುತಿರುವೆ ।
ಕರೆಯಲು ನಿನ್ನನು,
ನಲಿಯುತ ಬರುತಲಿ
ಮುದ್ದಿಸಿ ಸುಖವನು ಇತ್ತಿರುವೆ ॥

ಆಟವನಾಡುತ
ಅಡುಗೆಯ ಮಾಡುತ
ಮಣ್ಣಿನ ಮುಂಡಿಗೆ ಬಡಿಸಿದ್ದೆ ।
ಪ್ರೇಮದಿ ಮುದ್ದಿನ
ಮಾತುಗಳಾಡುತ
ತರಗೆಲೆಯನ್ನವನುಣಿಸಿದ್ದೆ ॥

ಎದೆಯನು ಕೊರೆಯುವ
ಪ್ರೀತಿಯ ಸೂಸುತ
ಪ್ರೇಮದ ಪಾಶವ ಬಿಗಿದೇಕೆ? ।
ಬಿಗಿದರು ನಿಲ್ಲದೆ
ಬೇಗನೆ ನಾಕವ
ಸೇರುತ ಶೋಕವ ಕೊಟ್ಟೇಕೆ? ॥

ಕಂಬನಿಕಡಲೊಳು
ಹೃದಯದ ಹಡಗದಿ
ನಿನ್ನಯ ಪೀಠವ ಮಾಡಿಹೆನು ।
ಮುದ್ದಿನ ಭಗಿನಿಯ
ಮರೆಯುವುದುಂಟೇ?
ಎನ್ನಯ ಸರ್ವವನಿತ್ತಿಹೆನು ॥

ಮಾತೆಯ ಬಸಿರೊಳು
ಹುಟ್ಟಿದ ಋಣವನು
ಸಲಿಸಿದೆ ತೋರುತ ನಿಜಪ್ರೀತಿ ।
ಇರುಳಿನ ಬಾನೊಳು
ಕಾಂಬೆನು ಅನುದಿನ
ಸೋದರಿ, ನಿನ್ನಯ ತನುಜ್ಯೋತಿ ॥

## IX. ಪರಮೆಗೆ!

ಪರಮೆಯೆ! ಪರಮೆಯೆ! ಬರಬೇಡಿಲ್ಲಿಗೆ
ಹರುಷವು ದೊರಕದು ನಿನಗಿಲ್ಲಿ.
ತೆರಳೈ! ಹೂಗಳ ತೋಟಕೆ ಜೇನಿನ
ಶರಧಿಯ ಸೇವಿಸಿ ಸುಖಪಡಲು.

ಮುತ್ತಿನ ಹರಳಿನ—ಹೊಳಪಿನ ಮಂಜಿನ
ವೃತ್ತಾಕಾರದ ಕಣಗಳೊಳು
ಅತ್ಯಾತುರದಲಿ ಮೀಯುತ್ತಲಿ, ಲೋ-
ಕೋತ್ತರದೊಳು ನಲಿದಾಡಲು ಪೋ.

ಇಲ್ಲಿಗೆ ಬರಬೇಡೈ! ಇದು ಲೋಕದ
ವಲ್ಲಭನನು ನುತಿಸುವ ಮನೆಯು.
ಇಲ್ಲಿದು ಆತನ ಮಹಿಮೆಯ ನೆನೆಯಲು
ಎಲ್ಲರು ಬರುತಿಹ ದೇಗುಲವು.

ಕ್ಷಮೆಬೇಡಲು ನೀ ಮಾಡಿದ ದುರಿತವು
ಸುಮಸುಮದೊಳು ನೀ ಸಾರಿದುದೇ?
ಬೆಮೆಗೊಳಿಸುತ ಸೊಗಸನು ಬೀರುತ ನೀ
ಕಮನೀಯತೆಯನು ತೋರಿದುದೇ?

ಪರಮೆಯೆ! ಪರಮೆಯೆ! ಬರಬೇಡಿಲ್ಲಿಗೆ
ಹರುಷವು ದೊರಕದು ನಿನಗಿಲ್ಲಿ.
ತೆರಳೈ! ಹೂಗಳ ತೋಟಕೆ ಜೇನಿನ
ಶರಧಿಯ ಸೇವಿಸಿ ಸುಖಪಡಲು.

---

## X. ಜೋಗುಳ.

ದಾಲಚೀನಿಯ ಕ್ಷೇತ್ರದಿಂದಾ
ಸಾರ ಪೈರಿನ ಗದ್ದೆಯಿಂದಾ
ಜಲಜ ನಲಿಯುವ ಸರಸಿಯಿಂದಾ
ಸುಳಿವ ಪರಿಮಳವಾತದಿಂದಾ

ಮಂಜು ತುಂಬಿದ್ದ
ಒಂದು ಕನಸನ್ನ,
ನಾನು ತಂದಿಹೆನು
ಮಲಗು ಸೀಸಿನ್ನ.

ಮುದ್ದು ಕಣ್ಣನು ಮುಚ್ಚು ಬೇಗಾ
ಎದ್ದು ಮಿನುಗುವ ಹುಳುವು ಈಗಾ
ನಲಿದು ಹಾರಾಡುತ್ತೆ. ರಾಗ
ನಾನು ಹಾಡುವೆ; ನೀನು ಕೂಗ—

ಬೇಡ. ಹಾ, ಕಂದ!
ಚಂದ ಕನಸೊಂದ
ಗುಹೆಯ ಒಳಗಿಂದ
ತರುವೆ ನಾ ಕಂದಾ!

ಮುದ್ದು ಕಣ್ಣನು ಮುಚ್ಚು, ಕುವರಾ!
ಬಾನಿನಗಲದಿ ನಗುವ ತಾರಾ—
ನಿಕರ ಜಗಜಗಿಸುವುವು, ವೀರಾ!
ಮೊಗದಿ ಮುದ್ದನು ಇಡುವೆ, ಪೋರಾ!

ಮಲಗು ನೀ ಬಾಲಾ!
ಕನಸು ತಂದಿಹೆನು;
ಬೇಗ ಕರೆಯುವೆನು
ರವಿಯ ಉದಯದೊಳು.

## XI. ಮಿಂಚುಹುಳು.

ಎಲೆಲೆ ಬೆಳಕಿನ ಬಿತ್ತೆ! ಇರುಳ ಮೂಗಿನ ನತ್ತೆ!
ಹುಳುವೆಂದು ಹೆಸರಿಟ್ಟು ಹಳಿಯುವರೆ ನಿನ್ನ?
ಹುಳುವಾಗಿ ಹುಟ್ಟಿ, ಲೋಕವ ಬೆಳಗುತಿರಲಿಂತು
ಒಳ ಮೆಯ್ಯೊಳಾವ ಮಾಯದ ರೂಪೊ ನಿನಗೆ?

ಆರ ಭಾವನೆಯೊಸರ ಬಿಂದುವಾಗಿಹೆ, ನೀನು?
ಆರೆದೆಯ ತಾರ ಹಾರದ ಬಿಳಿಯ ಮುತ್ತು?
ಆರ ದುಗುಡದ ಕಿಡಿಯು? ಆರ ಬಯಕೆಯ ಕುಡಿಯು?
ಆರ ಎಮೆಯಿಂ ಜಾರಿಬಿದ್ದ ಕಂಬನಿಯು?

ಭಾವಶುದ್ಧಿಗೆ ನೆಲೆವನಲೆವ ಭಾವಿಕನೇನು?
ಜೀವನಕೆ ಸೆರೆಬಿದ್ದ ದೇವನೇ ನೀನು?
ಸಾವಿನಲಿ ಕುಡಿಗೊಂಡ ಜೀವದಂಕುರವೇನು?
ಆವ ಹೆಸರದು ನಿನಗೆ? ನಿನ್ನ ಪರಿಯೇನು?

ಆವ ನಾಡಿಂದೆ ಚಿರಪಥಿಕನಾಗುತೆ ಬಂದೆ?
ಆವನಪ್ಪಣೆಗಿರುಳ ಕಾವಲಲಿ ನಿಂದೆ?
ಆವ ಪರಿಧಿಯ ಸುತ್ತ, ಆರ ನೀನರಸುತಿಹೆ?
ಆವ ನೇಮವು ನಿನಗೆ ಕತ್ತಲೆಯ ಹಿಂದೆ?

ಮಾತಾಡೆ; ಸರಗೊಡೆ; ಉಸಿರಾಡೆ; ಮೌನದೊಳೆ
ಮಾತ ನೀ ಮೊಳಗಿಸುವೆ ಜಗವ ಬೆಳಗಿಸುವೆ.
ಪ್ರೀತಿಭಾಷೆಯು ಬೇರೆ; ಮಾತಿನರ್ಥವು ಬೇರೆ;
ಹೂತಿಹುದು ನಿನ್ನ ನುಡಿ ನಿನ್ನ ಮಿಂಚಿನೊಳೆ.

ಮಿರುಗುತಿಹೆ; ಕೊರಗುತಿಹೆ; ನಾಚುತಿಹೆ; ನಗುತಲಿಹೆ:
ಪರಿಪರಿಯ ವಿಷಮ ಭಾವದೊಳೇಳ್ವೆ; ಬೀಳ್ವೆ;
ಬರೆವೆ ಹುಸಿಮಬ್ಬಿನಲಿ ನನ್ನಿಯಕ್ಕರಗಳನು;
ಬರೆದುದನು ತೊಡೆವೆ; ನನ್ನಿಯ ಹುಸಿಯ ಮಾಳ್ಪೆ.

ಧರೆಯ ನಿದ್ದೆಯ ಬಲೆಗೆ ಬಿದ್ದ ಮೀನೆಲೆ ನೀನು!
ಇರುಳ ಕನಸಿನ ಸೀರೆಸಿರಿಯ ಜರಿ ನೀನು!
ಮರವೆ ಚೆಲ್ಲಿದ ತಿಳಿವಿನೊಂದು ತುಂತುರು ನೀನು!
ಅರಿಕೆಯಲಿ ಹುಳು; ನಿಜದಿ ಮೇಲ್ನಾಡ ಹುರುಳು!!

---

## XII. ತಾಜಮಹಾಲ್.

೧

ಚೆಲುವ ದೇವಿ ರೂಪುಗೊಂಡು ಜಗಕೆ ಬಂದಳೊ!
ಜಗಕೆ ಬಂದು ನಮ್ಮ ನಾಡ ಹುಡುಕಿಕೊಂಡಳೊ!
ಹುಡುಕಿಕೊಂಡು ನಮ್ಮ ಸೇರಿ,
ನಾಡಿಗೊಂದು ಪೆಂಪ ಬೀರಿ,
ಧರೆಗೆ ಮಧುರ ಮುಖವ ತೋರಿ,
ದೇಶಕೊಂದು ಯಶವ ಕೋರಿ,
ಚೆಲುವ ದೇವಿ ರೂಪುಗೊಂಡು ಜಗಕೆ ಬಂದಳೊ!
ಜಗಕೆ ಬಂದು ನಮ್ಮ ನಾಡ ಹುಡುಕಿಕೊಂಡಳೊ!

೨

ಧವಲಮೂರ್ತಿ, ತಾಜ್! ನೀನು ನಲ್ಮೆಯುಡುಗರೆ!
ಸ್ನೇಹಚರಿತೆ ಕೇಳಿ ಜಗಕೆ ನಿನ್ನೊಳಕ್ಕರೆ.
ಶಹಜಹಾನ ಬಾದಶಹನು
ಮಡಿದ ಮಡದಿ ತಾಜಳನ್ನು
ನೆನೆದು ನಿನ್ನ ಕಟ್ಟಿಸಿಹನು,
ಏನು ಧನ್ಯಳಮ್ಮ ನೀನು!
ಧವಲಮೂರ್ತಿ ತಾಜ್! ನೀನು ನಲ್ಮೆಯುಡುಗರೆ!
ಸ್ನೇಹಚರಿತೆ ಕೇಳಿ ಜಗಕೆ ನಿನ್ನೊಳಕ್ಕರೆ.

೩

ಗಿರಿಯ ಬಯಲ ಬನದ ನಡುವೆ ಯಮುನೆ ಹರಿವಳು!
ಹರಿದು ನಲಿದು ಪಾಡಿ ನಿನ್ನ ಪಾದ ತೊಳೆವಳು!
ಪ್ರೇಮದಿಂದ ಪಾದ ತೊಳೆದು,
ಜೋಗುಳವನು ಹಾಡಿ ನಲಿದು,
ಬಾಹುಗಳಲಿ ಒಮ್ಮೆ ಬಿಗಿದು,
ಮುತ್ತನೊಂದನಿಟ್ಟು ನೆಗೆದು,
ಗಿರಿಯ ಬಯಲ ಬನದ ನಡುವೆ ಯಮುನೆ ಹರಿವಳು!
ಹರಿದು ನಲಿದು ಪಾಡಿ ನಿನ್ನ ಪಾದ ತೊಳೆವಳು!

೪

ಚೆಲುವ ದೇವಿ ತಾಜಮುಹಲ್! ಏನು ಬೆಡಗಿದು?
ಜಗವನೆಲ್ಲ ಮರುಳುಮಾಡಿ ಗೆಲಿದ ಸೊಗಸಿದು!
ಲೋಕ ನಿನ್ನ ಕಾಣ ಬಂದು,
ಕಾಣದಾಯ್ತು ಕಿರಿಯ ಕುಂದು.
ನಾಕ ಕಂಡ ತೆರದಿ ನಿಂದು
ಮೂಕವಾಯ್ತು ನಿನ್ನ ಕಂಡು
ಚೆಲುವ ದೇವಿ ತಾಜಮುಹಲ್! ಏನು ಬೆಡಗಿದು?
ಜಗವನೆಲ್ಲ ಮರುಳು ಮಾಡಿ ಗೆಲಿದ ಸೊಗಸಿದು!

೫

ಚಂದ್ರಕಾಂತಶಿಲೆಯೊಳಿಂತು ಕಾವ್ಯ ಬರೆದರೆ?
ಕ್ರೂರವಾದ ಕಲ್ಲೊಳಿಂತು ನಿನ್ನ ಕೊರೆದರೆ?
ವಿಗತವಿಭವ ತೋರುತಿಹೆವು.
ನಿನ್ನ ಚೆಲುವ ಸಾರುತಿಹೆವು.
ಸಾರಿ ಮುದದಿ ಏರುತಿಹೆವು.
ತಲೆಯ ತೂಗಿ ಕೇಳುತಿಹೆವು.
ಚಂದ್ರಕಾಂತಶಿಲೆಯೊಳಿಂತು ಕಾವ್ಯ ಬರೆದರೆ?
ಕ್ರೂರವಾದ ಕಲ್ಲೊಳಿಂತು ನಿನ್ನ ಕೊರೆದರೆ?

## XIII. ನನ್ನ ಕತೆ.

ಹಗಲೆಲ್ಲ ತಿರುಗಾಡಿ ಬಳಬಳಲಿ ಬಿಟ್ಟೆ;
ಮೆಲ್ವಾಸ ಮಂಚದಲಿ ನಾ ಮಲಗಿ ಬಿಟ್ಟೆ.
ಆಗೊಂದು ಬಿಳಿಮುಗಿಲು ಕೋಣೆಯೊಳ ಸೇರಿ
ನನ್ನನ್ನು ವಂದಿಸಿತು ನಗುಮಿಂಚ ಬೀರಿ ॥

ಯಾರೆಂದು ಕೇಳಿದೆನು. ಗುಡುಗುಗಳನಾಡಿ
ಆ ಮುಗಿಲು ಕಣ್ಣೀರ ಬಿಡುವುದನು ನೋಡಿ,
'ಅಚ್ಚುಮೆಚ್ಚಿನ ಗೆಳೆಯನಿವನನ್ನು ಮರೆತೆ'
ಎಂದೆಂದು ನಾ ಮುಗಿಲ ಹೆಗಲೇರಿ ನಿಂತೆ ॥

ನಂದನದ ತಂಬೆಲರ ತಂಪನ್ನು ಕುಡಿದು,
ಕಿನ್ನರರ ಗಾಯನದ ಇಂಪನ್ನು ಸವಿದು,
ಬೆಟ್ಟಗಳ ತುದಿ ಹಾರಿ, ಗೋಪುರವ ಮೆಟ್ಟಿ
ಮೆಲ್ಲನೇ ಮೇಲೇರಿ ಹಾರಿದೆವು ತೇಲಿ ॥

ಚುಕ್ಕಿಗಳ ದೇಶದಲಿ ತಿರುಗಿದೆವು ನಾವು;
ಚುಕ್ಕಿಗಳ ಒಡನಾಡಲಿಚ್ಛಿಸಿದೆ ನಾನು.
ಬಿಳಿಮುಗಿಲು ಹೊಳೆಹೊಳೆವ ಚುಕ್ಕಿಯನ್ನೊಂದು
ಕರೆಕರೆದು ಪೇಳಿತದು 'ಬಾ ವಿಹರಿಸೆಂದು' ॥

'ಈ ನಿನ್ನ ಗೆಳೆಯನು ಚತುರನಾದರೇನು?
ಹಕ್ಕಿಗಳ ಮೊಟ್ಟೆಗಳನೊಡೆದಿಲ್ಲವೇನು?
ಒಡನಾಡಿ ನಾನಾಗಲಾರೆ'ಂದು ಪೇಳಿ
ಮುಚ್ಚಿತದು; ನಾವ್ ತೆರಳೆ, ಮಿನುಗಿತದು ಮರಳಿ ॥

ಚುಕ್ಕಿಗಳ ರಾಜನನು ಚಂದ್ರಮನ ಕರೆದು
ಅವನೊಡನೆ ನಾವಿನ್ನು ವಿಹರಿಸುವೆವೆಂದು
ಆ ಮುಗಿಲು ಚಣದಲ್ಲಿ ಚಂದ್ರಮನ ಸೇರ್ದು
'ಗೆಳೆಯನೊಡನೆನ್ನ ನೀನಾಡೆ'ಂದಿತೆಂದು ॥

ಚಂದ್ರಮನು ನನ್ನನ್ನು ದಿಟ್ಟಿಸುತ ನಿಂತು
ದುಃಖದಿಂದಲಿ ಪೇಳಿದನಸಾಧ್ಯವೆಂದು—
ತಂಗಿಯರ ಕೂದಲನು ಸೆಳೆದೆಳೆದು ಅಂದು
ಸಂತಸವ ಪಡೆದುದನು ಸ್ಮರಿಸಿದೆನು ನಿಂದು ॥

ಆಗೆನ್ನ ಬಿಳಿಮುಗಿಲು ಮತಿಗೆಟ್ಟು ಬಿಟ್ಟು
ಅತ್ತಿತ್ತ ಅಲೆದಾಡಿ ಬಹುದೂರಕೊಯ್ದು,
ಮುಗಿಲನ್ನು ಚುಂಬಿಸುವ ಪರ್ವತದ ಮೇಲೆ
ಇಳಿಸಿತದು ನನ್ನನ್ನು. ಮರೆಯಾಯ್ತು ಮತ್ತೆ.

ಕೂಗಿದೆನು ಬಳಬಳನೆ; ಕಂಬನಿಯು ಸುರಿಸಿ
ಮೈಯಲ್ಲಿ ನೀರಾದೆ, ಆಯಾಸವಾಗಿ.
ಆಗಲಾ ಪರ್ವತವು ಭೀಕರದ ಮಾತು
ನುಡಿಯಿ'ತಂಜುಬುರುಕರಿಗೆ ಇದಲ್ಲ ಠಾವು' ॥

ಉರುಳಿದೆನು, ಮೇಲಿಂದ ಗಡಗಡನೆ ಕೆಳಗೆ—
ಗಿಡದಿಂದ ಪೊದರಿನಲಿ; ಕಲ್ಲಿಂಗೆ ಮತ್ತೆ;
ಕಲ್ಲಿಂದ ಮುಳ್ಳಿಂಗೆ; ಮುಳ್ಳಿಂದ ಕಡೆಗೆ
ಕೆಸರಿದ್ದ ಗದ್ದೆಯಲಿ ಭೃಗುಪತನದಿಂದೆ ॥

ಕೋಯೆಂದು ಕೂಗಿತದು ಅಂಗಳದ ಕೋಳಿ.
ನಾನೆದ್ದು ನೋಡುವೆನು ಬರಿಯ ನೆಲದಲ್ಲಿ
ಬಿದ್ದಿದ್ದೆ. ಚುಕ್ಕಿಗಳ ದೇಶದಲಿ ಹಾರಿ
ರೆಕ್ಕೆಗಳು ಹಾಳಾದ ಹಕ್ಕಿಯಂದದಲಿ ॥

---

## XIV. ಕುರುಬರ ತಿಮ್ಮ.

ಸಾವಿರ ಕುರಿಗಳ ಮಂದೆಯ ಕುರುಬಗೆ
ಅಂಕೆಯ ತಿಳಿವಳಿಕಿರುತಿಹುದೆ?
ಕುರಿಗಳು ಮೇಯ್ವುವು; ನಡೆವುದು ಮಂದೆಯು—
ದಾರಿಯು ಹಿಂದಕೆ ಬೀಳುವುದು.

ಕುರುಬರ ತಿಮ್ಮನು ಕುರಿಗಳನಟ್ಟಿ
ನಡೆದನು ಕಾಡಿನ ಹಾದಿಯಲಿ.
ಮೇಯುವ ಕುರಿಗಳ ಮಂದೆಯ ಹಿಂದೆ
ನಿಂತಿಹ ಕುರುಬನಿಗೇಂ ಚಿಂತೆ?

ಬಂದರು ನಾಲ್ವರು ಕುದುರೆಯನೇರಿ
ದಾರಿಯು ತಪ್ಪಿದ ಸೈನಿಕರು.
'ಕುರುಬನೆ, ನಾಡಿಗೆ ಹಾದಿಯದೆಲ್ಲಿ?'
ಎಂದರು ತಿಮ್ಮಗೆ ಸೈನಿಕರು.

'ಕಾಡಿನ ನಡುವಿದು. ಕಳೆಯಿತು ಸಂಜೆ
ನಾಡಿನ ಹಾದಿಯು ಇಲ್ಲಿಲ್ಲ.
ಬಡಗಿಗೆ ತಿರುಗುತ ಪೂರ್ವಕೆ ನಡೆಯೆ
ಪಡೆಯುವಿ ನಾಡಿನ ಪರಿಸರವ.'

ತಿಮ್ಮನ ಮಾತಿಗೆ ಸೈನಿಕನೊಬ್ಬ
ಪೇಳಿದ:—'ಕುರುಬನೆ ಬಾಯಿತ್ತ.
ತೋರಿಸು ಹಾದಿಯ ನೀನೆಮಗೊಂದು
ಕೊಡುವೆನು ತುಂಬಾ ಹಣವೆ'ಂದು.

'ಆದರೆ, ಮಂದೆಯ ಕಾಯುವನಾರು?
ತೋಳನ ತಡೆಯಲು ಯಾರಿಹರು?'
ಎನ್ನಲು ತಿಮ್ಮನು, ಸೈನಿಕನೆಂದ—
'ತೋಳವು ಬಾರದು ಹೇ ಕಂದ.'

'ಒಡೆಯನು ನನ್ನೊಳು ನಂಬಿಗೆಯಿಂದ
ಮಂದೆಯನಿತ್ತನು. ಇಲ್ಲಿಂದ
ಹೋಗುವ ಧರ್ಮವು ರುಚಿಸದು ನನಗೆ
ಒಡೆಯನ ಶಾಸನ ಬಿಡಲಾರೆ.'

ಎನ್ನುವ ತಿಮ್ಮನ ಮುಖವನೆ ನೋಡಿ
ಸೈನಿಕನೆಂದನು ಬೆರಗಾಗಿ.
'ಸಾವಿರ ಕುರಿಗಳ ಬೆಲೆಯನ್ನು ಕೊಳ್ಳು!
ನಾಡಿಗೆ ನಮ್ಮನು ಸೇರೊಯ್ಯು.'

ತಿಮ್ಮನು ತಲೆಯನು ಆಡಿಸುತೆಂದ
'ಆಗದು, ಆಗದು ನನ್ನಿಂದ.'
ಆಗಲೆ ಹಲವರು ಕುದುರೆಯನೇರಿ
ಬಂದರು ಜಯಜಯಕಾರದಲಿ.

ನಾಡಿನ ಹಾದಿಯ ಹುಡುಕುತಲವರು
ನೆಟ್ಟಗೆ ನಡೆದರು ಸೈನಿಕರು.
ತಿಮ್ಮನು ಚದರಿದ ಮಂದೆಯನೊಟ್ಟೈ,
ಹಾದಿಯ ಹಿಡಿದನು ಹಾಡುತಲಿ.

ಮರುದಿನ ರಾಜನ ದೂತನು ಬಂದು
ವಂದಿಸಿ ತಿಮ್ಮಗೆ ಹೇಳಿದನು:—
'ಅರಸಗೆ ಮಂತ್ರಿಯು ಬೇಕಂತೆ
ನಾಡೊಳು ನೀನೇ ಅವನಂತೆ!'

ಕುರುಬರ ಬಾಲನು ತಿಮ್ಮನು ಒಡನೆ
ಚಿಂತಿಸಿ ಪೇಳಿದನಾತನಿಗೆ:—
'ಒಡಯನಿಗೆನ್ನಯ ಸೇವಕನನ್ಯನು
ದೊರಕಿದ ಬಳಿಕವೆ ನಾ ಬರುವೆ.'

---

## XV. ಸಂಯುಕ್ತೆ.

ಬಾಂದಳಕೆ ರವಿಯಿಲ್ಲ; ಇಂದು ಹುಣ್ಣಿಮೆಗಿಲ್ಲ;
ಚಂದವೆಂಬುದು ಮೂರು ಲೋಕಕಿನಿತಿಲ್ಲ.
ಸುಂದರಿಯೆ! ನಿನಗೆ ಕುಂಕುಮತಿಲಕ ಮೊಗಕಿಲ್ಲ;
ಚೆಂದುಟಿಯ ಮೇಲೆ ನಗೆಯಾಟವೊಂದಿಲ್ಲ.

ಬೆಳಕು ಹರಿಯುವ ಮೊದಲೆ ಮುಂಜಾವ ಮುಸುಕಿದುದೆ?
ಬಲಿವ ಮೊದಲೇ ಮುಗುಳ ತುಂಬಿ ಮೂಸಿದುದೆ?
ನಲಿವ ಮೊದಲೇ ಹರೆಯ ಮೇದುದಲ್ಲವೆ ಮುಪ್ಪು?
ಲಲನೆ! ನಿನಗೀ ಪಾಡು ದೊರೆತ ಬಳುವಳಿಯೇ?

ನುಡಿದ ದೂತನ ಮಾತನಾಲಿಸುತೆ ಸಂಯುಕ್ತೆ
ಮಿಡುಕಿದಳು ಸೆರೆ ಬಿಗಿದ ಶೋಕದುಬ್ಬೆಗದಿ;
ಸಿಡಿಲ ನಾಲಿಗೆ ಹೊಡೆಯೆ, ಕುಡಿಮೊಳೆಯ ಕಾಣಿಕೆಯ
ಕೊಡುವ ಕಳಿಲೆವೊಲು ಕಂಬನಿಯ ಸುರಿಸಿದಳು.

ಬಾನೆಡೆಯ ನಿಟ್ಟಿಪಳು, ಕೈಮುಗಿವಳೊಮ್ಮೊಮ್ಮೆ,
ಜಾನಿಪಳು; ನಿಟ್ಟುಸಿರ ಸೂಸುತಿಹಳೊಮ್ಮೆ.
ಬಾನೆಂಬ ಪುಸ್ತಕವನೋದಿ ತಿಳಿದವಳಂತೆ
ತಾನೆ ತನ್ನೊಳಗಿಂತು ಹಳವಿಸಿದಳಾಗ.

ಆವ ಸೀಮೆಯ ಸೇರಿ ಸಾರಿ ಮರೆವರು ಜಗವ?
ಆವ ನಾಡದು ನಮ್ಮ ಬಾಳುವೆಯ ಗೂಡು?
ಆವೆಡೆಯ ಸವಿಬಾಳು ಮುಕುತಿಬಳ್ಳಿಯ ಮುಗುಳು?
ಆವೂರ ಸೇರಿ ಮರೆವುದೆ, ಎನ್ನ ನೀರ?

ಅಲ್ಲಿ ಹುಟ್ಟುವ ನಲ್ಮೆಯೊರತೆ ಬತ್ತುವುದಿಲ್ಲ.
ಅಲ್ಲಿ ದೊರಕುವ ಕೂಟ ಕಹಿಯಪ್ಪುದಿಲ್ಲ.
ಅಲ್ಲಿಯಾಸೆಯ ಸೊಡರು ಕರಿಕಿ ನಂದುವುದಿಲ್ಲ.
ಅಲ್ಲಿ ನೀನಾನೆಂಬ ಭೇದವೊಂದಿಲ್ಲ.

ಆ ನಾಡ ಸಂದು ನೀನೆನ್ನ ಮರೆವುದೆ, ನಲ್ಲ?
ಮೌನಮುದ್ರೆಯನೊತ್ತುವುದೆ ಎನ್ನ ಮೊಗಕೆ?
ಕಾನನವು ಬೆದರಿಪುದು; ಕೋಗಿಲೆಯು ಬೆಚ್ಚಿಪುದು;—
ಈ ನೆಲದ ಸೊಬಗೆನ್ನ ಜೀವನದ ಹಗೆಯು.

ನಿನ್ನ ನಗೆ ಬಣ್ಣವುರ ತೀವಲುಂಟೇನಿನ್ನು?
ನಿನ್ನ ಕುಡಿ ನೋಟ ಬರೆಯುವುದುಂಟೆ ರೂಪ?
ಬಣ್ಣನೆಯ ಸುಗ್ಗಿಯಿದು; ಜೀವಕಳೆಯಿನಿತಿಲ್ಲ.
ಬಣ್ಣಗಾರನ ಕುಂಚ ಬರಿದಾದುದಲ್ಲ!

ಮೂಡಿ ಮರೆಯಾಗುವೆಳನಗೆಯಂತೆ, ನೀನಿನಿಯ
ಮೂಡಿ ಮರೆಯಾದ ಮೇಲೀ ಧರಣಿಯಿಂದು
ಕಾಡ, ಸುಡುಗಾಡ ಮಾಳ್ಕೆಯಲಿ ಘೂರ್ಣಿಸುತಿಹುದು!
ಓಡುತೋಡುತೆ ಜೀವ ಮರೆಯನರಸುವುದು.

ಕನಸಾಗಿ ನೀ ಬಂದು ಅಳಿವೆಯೆನ್ನಸು ಬಾಳ;
ನೆನಸಾಗಿ ಬಂದು ನೆಮ್ಮುವೆ ಬೀಳುವೆದೆಯ.
ಮನಸಾಗಿ ಬಳಿಸೇರಿ ಸೆರೆಗೆಯ್ವೆಯಾತ್ಮವನು.
ಇನಿಯ ನೀನಾನೆಂಬ ಹದನಾವುದಿನ್ನು?

ಹಾರುತಿರಲೀ ಧಾತ್ರಿ! ಜಾರುತಿರಲೀ ಕಾಲ!
ಗಾರುಗೊಳಿಸಲಿ ವಿರಹಿಗಳ, ಬಂದ ಸುಗ್ಗಿ!
ಆರಾರನೆಂತೆಂತೊ ಕೊಂದು ಕೂಗಲಿ ಬದುಕು
ನೀರೆ ಈಕೆಗೆ ಕಣ್ಣನೀರೆ ಕೊನೆ, ಮೇರೆ.

ತಾರಗೆಯ ಮುಗುಳರಳಿ ನಗೆಯ ಸೂಸುವ ಬನವಿ
ನೀರನೊರಗಿಹನು ಸವಿಗನಸುಗಳ ಮೆದ್ದು.
ಹಾರುತಲ್ಲಿಗೆ ನೆಗೆದು, ತೋಳಪಾಶದಿ ಬಿಗಿದು,
ಸೇರುವೆನು. ಪುಲಕರೂಪದಿ ಮೈಗೆ ಬಿದ್ದು.

---

## XVI. ನೆರೆ.

ಮಳೆಗಾಲ; ಜಿರ್ರೆಂದು ಮಳೆ ಬೀಳುತಿತ್ತು,
ಸುತ್ತಲು ಕತ್ತಲು ಕವಿದಿದ್ದಿತು;
ಗುಡುಗುಡು ಗುಡುಗುಡು ಗುಡುಗಾಡುತಿತ್ತು,
ಥಳಥಳ ಮಿಂಚು ಥಳಿಸಿದ್ದಿತು!
ಭೋರೆಂದು ಬಿರುಗಾಳಿ ಬೀಸುತಲಿತ್ತು,
ಒಲೆಯೊಳು ತನಿಗೆಂಡ ಕಳಕಳಿಸಿತ್ತು.

ಕೆಲಸವ ಪೂರೈಸಿ ಹೊಲದಿಂದ ಬಂದು
ಚಳಿಕಾಯಿಸುತ್ತ ಮಂಜಣ್ಣನು,
ಬೆಂಕಿಯ ಬಳಿಯಲ್ಲಿ ಕೂತಿದ್ದನಾಗ
ನಾವೆಲ್ಲರವನ ಮುತ್ತಿದ್ದೆವು;
ಕತೆಗಾರ ಮಂಜಣ್ಣ ಬಲು ಮುದಿಯಾಳು,
ಆದರವನಾ ಬಾಳು ಕಗ್ಗಲ್ಲ ಬಾಳು!

ಅಲ್ಲಿಯೆ ಹತ್ತಿರ ಕುಳಿತಿದ್ದ ಕಿಟ್ಟು
"ಮಂಜಣ್ಣ, ಒಂದು ಕತೆ ಹೇಳಿ"ಂದನು.
ಅದ ಕೇಳಿ ಬಹುದೂರ ಕುಳಿತಿದ್ದ ಪುಟ್ಟು
ಹತ್ತಿರ ಹತ್ತಿರಕ್ಕೈತಂದನು.
"ಕಟ್ಟಿದ ಕತೆ ಬೇಕೊ? ನಡೆದದ್ದೆ ಸಾಕೊ?
ಯಾವುದು ಎಲೆ ಕಿಟ್ಟು?" ಮಂಜಣ್ಣನೆಂದ.

"ಕಟ್ಟಿದ ಕತೆಯೇಕೆ, ನಡೆದದ್ದೆ ಹೇಳು."
ಎಂದೆವು ಒಟ್ಟಿಗೆ ನಾವೆಲ್ಲರೂ.
ಮಂಜಣ್ಣ ಕತೆ ಹೇಳಲಾರಂಭವಾಡೆ
ಎಲ್ಲರು ಹತ್ತಿರಕ್ಕೈತಂದರು;
ಮಂಜಣ್ಣನೆಂದರೆ ನಮಗೆಲ್ಲ ಪ್ರಾಣ,
ಕತೆ ಹೇಳುವುದರಲ್ಲಿ ಅವನತಿಜಾಣ.

"ಆಗಿನ್ನೂ ನಾ ಹುಡುಗ, ಕಿಟ್ಟುವಷ್ಟಿದ್ದೆ
ಎಪ್ಪತ್ತು ವರ್ಷದಾಚೆಯಲಿ."
"ಆ ಮೇಲೆ? ಆ ಮೇಲೆ? ಆ ಮೇಲೆ? ಹೇಳು!"
ಎಂದೆವು ಒಟ್ಟಿಗೆ ನಾವೆಲ್ಲರೂ.
"ದೇವರು ಕಳುಹಿದನೆಂದೆಂಬರಣ್ಣ
ಪಾಪಕೆ ಶಿಕ್ಷೆಯದೆಂದೆಂಬರಣ್ಣ!
ದೇವರೊ ದೆವ್ವವೊ ಯಾರಾದರೇನಂತೆ
ಬಲು ಘೋರವಾಗಿದ್ದಿತಾ ಮಳೆಯು!
ಹೊಳೆ ಬಂದು, ನೆರೆಯೇರಿ, ಊರೂರೆ ತೇಲಿ
ಮಕ್ಕಳು ಮರಿಗಳ ಬಲು ನುಂಗಿತು."
"ಆ ಮೇಲೆ? ಆ ಮೇಲೆ? ಆ ಮೇಲೆ? ಮೇಲೆ?"
ಎಂದೆವು ಮತ್ತೆ ನಾವೆಲ್ಲರೂ ಕೇಳೆ.
"ನಡುರಾತ್ರಿಯಾಗಿತ್ತು, ಮಲಗಿದ್ದೆವೆಲ್ಲ,
ಗುಡಿಸಲ ಸುತ್ತ ನೀರೇರಿತು!
ಪಡಚಾಗುತಿದ್ದೆವು ಕಿಟ್ಟು ನಾವೆಲ್ಲ,
ಹಂಡ್ನಾಯಿ ನಮ್ಮ ಕಾಪಾಡಿತು.
ಬಗುಳಿತು, ಬಗುಳಿತು ಕರೆಯಿತು ನಮ್ಮ,
ಏಳಲೆ ಇಲ್ಲವು ನಮ್ಮಪ್ಪ ಅಮ್ಮ."
"ಏಳ್ವಾರದಾಗಿತ್ತೆ ಮಂಜಣ್ಣ, ನೀನು?
ಹೋಗಲಿ, ಆ ಮೇಲೆ ಹೇಳೆಂ"ದೆವು.
"ಆಗಿನ್ನು ಸಣ್ಣವನಾಗಿದ್ದೆ ನಾನು
ನಿನ್ನಷ್ಟು ಕಿಟ್ಟೊ, ಇರಲಿಲ್ಲವೊ.
ಕೇಳಿರಿ ಹೇಳುವೆ, ಮುಂದಾದ ಕತೆಯ,
ಆ ಮೇಲೆ ನಮಗಾದ ಬಲು ದೊಡ್ಡ ವ್ಯಥೆಯ.
"ಹಂಡ್ನಾಯಿ ಬಗುಳಿತು ಬಲು ಗಟ್ಟಿಯಾಗಿ
ಮಲಗಿದ್ದರೆಲ್ಲರು ಮೈಮರೆತು;
ಕದಗದು ಬಾಗಿಲ ಹಗ್ಗವ ಹರಿದು

ಒಳನುಗ್ಗಿತೆಮ್ಮ ಕರೆಕರೆದು.
ನೆರೆಯೇರಿ ನೀರುಕ್ಕಿ ಮೊರೆಮೊರೆದು ಬಂತು,
ನೊರೆಯಾಗಿ ಸುಳಿಸುಳಿದು ಭೋರ್ಗರೆದು ಬಂತು!

"ಎಬ್ಬಿಸಿತಪ್ಪನ ಕೂಗಿಕೊಂಡೆದ್ದ,
ಅಮ್ಮನ ನನ್ನ ಎಬ್ಬಿಸಿದ;
ಹಂದ್ನಾಯಿ ಬಾಲವನಾಡಿಸುತಿತ್ತು,
ನೆರೆ ಬಂದು ಹೊಸಲಿಗೇರಿದ್ದಿತು!
'ಮಾಡುವುದೀಗೇನು' ಎಂದ ನಮ್ಮಪ್ಪ!
'ಅಯ್ಯಯ್ಯೊ, ಮಂಜೂ!' ಎಂದಳೆಮ್ಮಮ್ಮ!

"ಹಣತೆಯ ದೀಪವ ಹೊತ್ತಿಸಿ ನೋಡೆ
ಹೊಳೆ ನೀರು ಭೋರೆಂದು ಏರುತಿತ್ತು;
ಅಪ್ಪ ನೋಡಿದ ಮೇಲೆ ಸುತ್ತಲು ತಿರುಗಿ,
ಮುಖವರಳಿತವನಿಗೆ ಸಂತೋಷದಿ:
ಬಿದಿರಟ್ಟವ ಹಿರಿದು ಜೋಡಿಸಿ ಒಟ್ಟಿ
ತೆಪ್ಪವ ಮಾಡಿದನತಿ ಬೇಗ ಕಟ್ಟಿ!

"ಏರಿತು! ಏರಿತು! ಭೋರ್ಗರೆವ ನೀರು!
ಮುಂಭಾಗದಾ ಗೋಡೆ ದೊಪ್ಪೆಂದಿತು!
ಮನೆಯೊಳಗೆ ನೀರ್ ನುಗ್ಗಿ ಮೊಳಕಾಲಿಗೇರಿ
ಹಂದ್ನಾಯಿ ತಲೆ ಮಾತ್ರ ಮೇಲಿದ್ದಿತು!
ದೇವರೇ ಗತಿಯೆಂದು ತೆಪ್ಪವನೇರಿ
ಹೊರಟೆವು ಭೋರೆಂಬ ನೆರೆಯೊಳು ಹೋ!

"ಬಿರುಗಾಳಿ ಬೀಸಿತು, ಥಳಿಸಿತು ಮಿಂಚು,
ಸಿಡಿಲೆರಗಿ ಭೂಮಿ ನಡುಗಿದ್ದಿತು;
ಹಾರುತ್ತ ಬೀಳುತ್ತ ತೇಲಿತು ತೆಪ್ಪ,
ಜೀವ ಕೈಯಲಿ ಹಿಡಿದು ಕುಳಿತಿದ್ದೆವು;
ತೆಪ್ಪ ಸೇರಿತು ದಡವ ಪುಣ್ಯವಶದಿಂದ—
ನಮ್ಮಪ್ಪ 'ಅಯ್ಯಯ್ಯೊ, ಹಂದೆಲ್ಲಿ?' ಎಂದ.

“ತೆಪ್ಪವ ಏರುವ ಗಲಿಬಿಲಿಯಲ್ಲಿ
ಹಂಡನ ಮರೆತು ಬಂದಿದ್ದೆವು!
ಅಪ್ಪನ ಕಣ್ಣಲ್ಲಿ ಸುರಿಯಿತು ನೀರು,
ತುಸು ಯೋಚಿಸುತ್ತ ನಿಂತುಕೊಂಡ.
ಅಪ್ಪನ ಮನದಲ್ಲಿ ಏನೇನು ಬಂತೊ?
ತೆಪ್ಪ ಹತ್ತುತ ಗುಡಿಗೆ ಹೊರಟನು ಮತ್ತೆ!

“ ‘ಅಯ್ಯಯ್ಯೊ, ಬೇಡ’ ಎಂದಳೆನ್ನಮ್ಮ;
ಅಪ್ಪನು ಹೊರಟನು ಇಂತೆನ್ನುತ:
‘ನಮ್ಮನು ಕಾಪಾಡಿತಾ ಹಂಡನಾಯಿ
ಬಾಯಿಲ್ಲದದನು ಕೈಬಿಡುವುದೆ?’
ಅಪ್ಪ ಹೋದನು ಬೇಗ; ತೆಪ್ಪ ಮರೆಯಾಯ್ತು,
ಅಪ್ಪನಿಗು ನಮಗದೆ ಕಡೆನುಡಿಯಾಯ್ತು!

“ಅಪ್ಪ ಹೋದವ ಮತ್ತೆ ಹಿಂತಿರುಗಲಿಲ್ಲ,
ಹಂಡ್ನಾಯಿ ಕೂಡ ಬರಲಿಲ್ಲವು;
ಮೂರು ದಿನದ ಮೇಲೆ ಹೊಳೆಯಾಚೆಯಲ್ಲಿ
ನಾಯಿಯಪ್ಪಿದ ಹೆಣ ಸಿಕ್ಕಿತಂತೆ!
ನಾಯಿಗಾಗಪ್ಪನು ಜೀವವ ಕೊಟ್ಟ,
ಉಪಕಾರಕಾಗಿಯೆ ನಮ್ಮನ್ನು ಬಿಟ್ಟ!”

ಮುದುಕನ ಮೋರೆಯ ನೋಡುತ್ತ ನಾವು
ಬೆರಗಾಗಿ ಕುಳಿತೆವು ಮಾತಾಡದೆ.
ಎಂದೆಂದಿಗೂ ಅಳದ ಮುಂಜಣ್ಣನಂದು
ಕಣ್ಣೀರ ಕರೆದುದನು ಕತೆ ಹೇಳುತ.
ಅವನಪ್ಪ ಸತ್ತುದಕಾಗತ್ತುದಲ್ಲ!
ಅವನಪ್ಪನಾ ನೀತಿಗಾಗತ್ತನಲ್ಲಿ!

## XVII. ಸಿರಿಪನ್ನೆ.

೧.

ಆರೀ ಈಕೆಯು ನಡೆವಳು, ಚೋರನ ಪದಗಳ ಭೂಮಿಗೆ ಮುಟ್ಟಿಸುತ,
ಚಲಿಸುವ ಉಸುರನು ಮೆಲ್ಲನೆ ತಡೆಯುತ,– ಮರಣದ ಚೇಷ್ಟೆಯ ನಟಿಸುತ್ತ,
ಎಡದಲಿ ಬಲದಲಿ ಹಿಂದಕೆ ಮುಂದಕೆ ದೃಷ್ಟಿಯ ಮಿಂಚನು ಸೂಸುತಲಿ,
ಏತರ ಗುಡುಗನು ಗುಡುಗಿಸೆ ಬರುವಳು ಕಾಲನನಂತದ ಒಂದಳದಿ? ॥

ದೂರದಿ ಉರುಳುವ ಸಾಗರದೂರ್ಮಿಯು ಮೆಲ್ಲನೆ ಮುಂದಕೆ ಬರುವಂತೆ,
ದೂರದ ಶಬ್ದದ ದೀರ್ಘದ ಪಡಿದನಿ ತಿಳಿಯದ ತೆರದಲಿ ಹರಿವಂತೆ,
ಮೇಘದ ನೀಲಚ್ಛಾಯೆಯು ಬಿಸಿಲನು ಮೆಲನೆ ಕ್ರಮಿಸುವ ತೆರದೊಳಗೆ
ಬರುವಳು, ಹಾಹಾ ಮೆಲ್ಲನೆ ಬರುವಳು, ದುಃಖಿತಹೃದಯದ ಸಿರಿಪನ್ನೆ ॥

'ಘೋಟಾರಾಣನು ಕಾಣನು, ತಾಯೇ! ಸಂಜೆಯ ಕತ್ತಲೆ ಹೆಚ್ಚುವುದು.
ದೂರದ ಭೇರಿಯ ಬಿರುದನಿ ಮೂಲವ ನೋಡಲು ಪೋದನೆ ಮನಸೋತು?
ಉನ್ನತ ಬೆಟ್ಟದ ಗುಮ್ಮಗೆ ಬೆದರುತ, ಮೂಲೆಯ ತಮದೊಳು ಅಡಗಿಹನೆ?
ಸಂಜೆಯ ಸುಯ್ಯಲು ಮಾರುತವೇಗಕೆ ಸ್ಪರ್ಧೆಯನೀಯುತ ಓಡಿದನೆ? ॥

'ಇಂಚರದರಗಿಳಿ, ಮಂಜುಲ ಸರದಲಿ ಉದಯನ ಕರೆಯ್ಯೆ ಒತ್ತ್ರಡವೆ!
ಎಲ್ಲಿಗೆ ಪೋದನು ಉದಯನು ತಾಯೇ? ಮನಸನು ಖೇದವು
ಕೊರೆಯುತಿದೆ!
ಆಟವು ಸಾಗದು, ಪಾಠವು ಸಾಯಲಿ, ಊಟವ ಮಾಡೆನು ಕೇಳ್, ತಾಯೇ
ಬೀರದ ಸೂಡಿನ ಬೇಟೆಯ ಕತೆಗಳ ಕೇಳೆನು ಉದಯನು ಇಲ್ಲದೊಡೆ ॥

ಹುಡುಕುವೆ, ಹುಡುಕುವೆ, ಬಾರೆಲೆ ತಾಯೇ!
ಸೊಡರನು ಬೆಳಗಲು ನೀ ಬಾರೇ' ॥

ಎನ್ನುತ ಉದಯನ ಓರಿಗೆಯ
ಬಾಲನು ಪಿರಿದುರೆ ಓದಿಸಿದ ॥

ಅಣುಗನ ಪ್ರಶ್ನೆಗೆ ಮೌನದಿ ಕಂಬನಿಯಿತ್ತಳು ಪನ್ನೆಯು ಸೆರಗಿಟ್ಟು.
ಆಗಳೆ, ಕುವರನ ಕಂಗಳು ನುಂಬನಿ ಸೋನೆಯ ಕರೆದುವು ಮೊರೆಯಿಟ್ಟು.
ಜನನೀ-ಪುತ್ರರ ಒಲುಮೆಯು ದುಃಖವು ಐಕ್ಯವ ಪೊಂದಿತು. ಮುದ್ದಿಸುತ್ತ
ಪನ್ನೆಯು ಪೆರೆಮೊಗ ಬಾಲನ ಕಂಗಳ ಸೊದೆಯನು ಕುಡಿಯುತ
ಪೇಳಿದಳು ॥

'ಕಂದನೆ, ಕೇಳೈ! ಉದಯನು ನಿದ್ದೆಯ ತಾನೇ ಮಾಳ್ಪನು ಸುಖದೊಳಗೆ.
ಗೋಳನ್ನಿಡುತಲಿ ರಾಣನ ನಿದ್ದೆಯ ಕೆಡಿಸಲು ಬಾರದು ಬಾಲಕನೆ.
ಆಟವನಾಡ್ವೆ ರಾಣನ ಪಾತ್ರವ ವಹಿಸುತೆ, ಈಗಳೆ, ಎಲೆಕಂದ!
ತೊನೆಯುವ ಹೂವಿನ ಗೊಂಚಲ ಮುಕುಟುವನಿಡುತಲಿ ಮನಸನು
ಪೂರೈಸೆ. ॥

'ಏರೈ ಗದ್ದುಗೆ— ಎಲರಿನ ಏರುಂಗತಿಯಾ ವೀಚಿಯ ಮೆಟ್ಟಿಲನು
ಮೆಟ್ಟುತ— ಸ್ವೈಪಿನ ರಾಜ್ಯವನಾಳಲು, ಉಬ್ಬುವ ಬೀರದ ಮೈಯ್ಗೊಂಡು.
ಇಂದಿನ ಸಂಜೆಗೆ ದೇಶದ ರಾಣನು ಪನ್ನೆಯ ಪುತ್ರನು ಜನಗಳಿರ!
ಉಡು ನೀ ಬಟ್ಟೆಯ, ತೊಡು ನೀ ಧಾಣೆಯ, ಝಳಪಿಸು ಕತ್ತಿಯ
ನೀ ವೀರಾ! ॥

'ಘೋಟಾ ರಾಣಗೆ ಪನ್ನೆಯ ಪುತ್ರಗೆ ಮಂಗಲ ಬೆಳಗಲಿ ಧರೆಯಲ್ಲಿ
ಸಾಗರವೇಷ್ಟಿತ ಜಗದೊಳು ನಿನ್ನಯ ಛತ್ರದ ಆಶ್ರಯ ಪೆಚ್ಚಿರಲಿ.
ವಂದಿಯ ಸ್ತೋತ್ರವ ಕೇಳುತ ಬಿರಿಸೊಗಸಿದ್ದೆಯ ಮಾಡುತ ತೊಟ್ಟಿಲೊಳಂ
ಕನಸೊಳು ನನಸಿನ ವೈಭವ ತಳೆಯುತ ಜನ್ಮನ ಸಾರ್ಥಕ ನೀಮಾಡು.'

ಅಂಬೆಯ ಮಾತನು ಲಾಲಿಸುತ
ಕುವರನು ಪೇಳಿದ ನಲಿಯುತ್ತ ॥

'ರಾಣನ ಪಾತ್ರವ ವಹಿಸುವೆ, ತಾಯೇ! ಬಾರಾ ರಾಣಿಯು ನೀನಿಂದು.
ಅರಿಗಳ ಗೋಣನು ಮುರಿಯುತ, ನಾಡೊಳು ಶಾಂತಿಯ ಸ್ಥಾಪಿಸಿ ಆಳುವೆನು.
ದಾರಿಯುಗೆಟ್ಟಿಹ ಉದಯನ ಹುಡುಕಲು ಚಣದಲಿ ಓಡಿರಿ, ಸೈನಿಕರೆ!
ನಾಡೊಳು ಶಾಂತಿಯ ನೆಲೆಸಲು ಪೋಗಿರಿ, ಎನ್ನಯ ಪ್ರೀತಿಯ ರಾಪುತರೆ!!'

ಕಪಟದ ವಚನವು ಕುವರನ ಕೋಮಲ ಮನದೊಳು ನಾಟಿತು ಎಂದೆನುತ
ಪನ್ನೆಯು ಮನದಲಿ ಸಂತಸಲವವನು ತಳೆಯುತ ಕಂದನ ಹರಸಿದಳು.
ರಾಣನ ವೇಷದ ಹರುಷದ ಬಾಲನ ಮಲಗಿಸಿ ತೂಗುಂದೊಟ್ಟಿಲೊಳು
ಸುಖಮಯ ದುಃಖದ ಧಾಟಿಯ ಪದದಲಿ ಪುತ್ರಗೆ ಜೋಗುಳ
ಪಾಡಿದಳು. ॥

ಸಪ್ತಸಾಗರ ಗುಹೆಗಳಿಂದಾ
ಜಗವಪಾಲಿಪ ಲೀಲೆಯಿಂದಾ
ಪ್ರಳಯಕಾಲದ ಗರ್ಭದಿಂದಾ
ಶಾಂತಿ ತಂದಿಹೆನು— ನಗುಮೊಗದ ಕಂದಾ
ಶಾಂತಿತಂದಿಹೆನು.

ಹಡಗುವೋಡುವ ಸಿಂಧುವಿಂದಾ
ನಲಿಪ ತನಿವರ್ಣವನಗಳಿಂದಾ
ತಾರೆ ಬೆಳಗುವ ಲೋಕದಿಂದಾ
ಕಪ್ಪತಂದಿಹೆನು— ನಗುಮೊಗದ ರಾಣಾ
ಕಪ್ಪತಂದಿಹೆನು.

ದೇಶಚರಿತೆಗೆ ಕುಂದು ತರುವಾ
ದೇಶದೈಸಿರಿ ಸೂರೆಗೈವಾ
ಮ್ಲೇಚ್ಛರಬ್ಬರ ತುಳಿಯಲೆಂದಾ
ಹೂಡು ಯುದ್ಧವನು
ಕಾಯು ಗೌರವವ.

ರಾಜನಾಗುವ ಕನಸು ತಂದಿಹೆ;
ಆತ್ಮಯಜ್ಞದ ಗೋರಿ ತಂದಿಹೆ.
ಸತ್ಯವಾಗುವ ಕನಸು ತಂದಿಹೆ.
ಹೊಂದು ಶಾಂತಿಯನು
ನೀ ಕನಸ ರಾಜ್ಯದೊಳು.

೨.

ಬೆಟ್ಟಿದು, ತಿಟ್ಟಿದು, ಪೊಲನಿದು, ತೊರೆಯಿದು, ಎಂಬುದ ನೋಡದೆ
ಓಡುವಿಯಾ?
ಮುಂದಕೆ ನಿನ್ನನು ನೂಕುವರಾರೈ ಇದಿರೊಳು ನಿನ್ನನು ಸೆಳೆಯುತ್ತ?
ನಿಲ್ಲೆಲೆ! ನಿನ್ನಯ ಕಿವಿಯೊಳು ಬೆಂಕಿಯ ವಾರ್ತೆಯನುಸುರುವೆ ವನವೀರಾ!
ಕಲ್ಲಿಗೆ ಎಡವುವಿ, ಮುಳ್ಳಿಗೆ ತಡವುವಿ, ಬೀಳುವಿ ಕರ್ಮಾಡು ಮಧ್ಯದೊಳು ॥

ನರಕದ ದ್ವಾರವು ತೆರೆದಿದೆ ಮುಂದಕೆ! ಕುದುರೆಯ ರಭಸವನಿಳಿಸಯ್ಯಾ—
ರಭಸದ ಜೋರಿಗೆ ನರಕದ ಗೋಡೆಗೆ ಮಂಡೆಯನೊಡೆಯುತ
ಸಾಯುವಿಯಾ?
ಕುದುರೆಯ ನಿಲ್ಲಿಸೆ, ಕುಳಿತಲ್ಲಿಂದಲೆ ಕುದುರೆಯ ಕಾಲನು ನೀ ಕಟ್ಟು!
ಅಥವಾ, ಕುದುರೆಯ ಬೆನ್ನನೆ ಬಿಡುತಲಿ ಮೂರ್ಖನೆ ಅಲ್ಲಿಯೆ ನೀನುಳಿಯು॥

ನಿನ್ನಯ ಬೆನ್ನಿನ ಹಿಂದಕೆ ಕೂಗುತ, ಕೀರುತ ಓಡುವರಿವರಾರು?
ಅವುಗಳ ಭಯದಿಂ ನೀನೇಂ ಓಡುವಿ? ಹಿಂದಕೆ ನೋಡದೆ ನೀಪೇಳು.
ಅನ್ನೆಯ, ಮಚ್ಚರ, ಪಾಪವು, ಮುನಿಸುಂ, ಎಂಬೀ ಮಿಗಗಳು ಓಡುವವು.
ಬೆನ್ನನು ಹಿಡಿಯುತ ಮೋಸದ ರಕ್ತದ ನಿನ್ನನು ಕೊಲ್ಲಲು ಹೇ ಖೂಳಾ! ॥

ಓಡುತ ಓಡ್ಯೈ—ಬೀಳುವ ತನಕಂ ಬೀಳುವ ಯೋಚನೆ ನಿನಗಿಲ್ಲಾ!
ಬೀಳುತ ಬೀಳ್ಯೈ—ರಭಸದಿ ಓಡಿದ ಮನುಜನು ಬೀಳಲೆಬೇಕಲ್ಲಾ!
ಇದಿರೊಳು ಎಲ್ಲವು ಶೂನ್ಯವು ನಿನಗೆಲೆ! ಓಡುತ ಓಡ್ಯೈ ರಾವುತನೆ!!
ಆದರೆ, ನಿಲ್ಲೆಲೆ! ಇನಿತುಂ ಚಿಂತಿಸು ತನ್ನೀ ಕಾರ್ಯದ ಲಕ್ಕಣಮುಂ ॥

ಸಿಡಿಯುವ ಸಿಡಿಲಿನ, ಮೊರೆಯುವ ಕಡಲಿನ, ರೋಷದ ಸಿಂಗನ ಪ್ರತಿನಿಧಿಯು
ಬರುವನು ನಿದ್ದೆಯ ವಧೆಯನು ಮಾಡಲು-ಗಾಢದ ನಿದ್ರೆಯ ಮಾಡದಿರು.
ರೂಪದಿ ಮೃತ್ಯುವು; ವರ್ಣದಿ ಕತ್ತಲೆ; ದೇಹದ ಗಾತ್ರದಿ ಕಾರ್ಮುಗಿಲು.
ತಿರ್ರನೆ ತಿರುಗಿಸಿ, ಸೌಳನೆ ಸೀಳುವ, ಪಿಡಿಯುತ ಕೈಯೊಳು ಕೂರಂಬು ॥

ದ್ವಾರವನೊಡೆಯುತ ಪ್ರಥಮದ ಹೊಡೆತಕೆ ಬಂದನು ಖೂಳನು ವನವೀರ
ಸುತ್ತಲು ಮುತ್ತಲು ದೃಷ್ಟಿಯ ಕೂರಸಿ ಬೆಳಗುತ, ಹುಬ್ಬನು ಗಂಟಿಕ್ಕಿ.
'ನೋಡೆಲೆ ದಾಸಿಯೆ! ಖೂಳನ ಪುತ್ರನ ತೋರಿಸು ರಾಣನಿಗೆನ'ಗೆಂದು
ಪನ್ನೆಯ ಕೋಮಲ ಕೇಶವನೆಳೆದನು ತನ್ನಯ ಕಲ್‌ಕಯ್‌
ಮುಷ್ಟಿಯೊಳು ॥

'ಎನ್ನಿಂ ರಾಣನ ಪುತ್ರನ ತೋರಿಸೆ ಆಗದು, ಆಗದು ಎಲೆ ಖೂಳಾ!
ಸ್ವಾಮಿಯ ಭಕ್ತಿಯ ದೂಷಿಸೆ ಪನ್ನೆಯ ಹೃದಯವು ನಿಜದಲಿ ಚಿಂತಿಸದು.
ತಿರುಗೆಲೆ! ಸಾಸಿರ ತಾರೆಯು ಮಿನುಗುತ ನೋಳ್ಪುವು ನಿನ್ನನು ಬಾಂದಳದಿ
ಶಿಶುಗಳ ಹತ್ಯವ ಮಾಡುತ ನರಕದ ಕೆಸರನು ರಾಣಾ ಪೊಂದದಿರು.' ॥

ರಾಣಗೆ ಪನ್ನೆಯು ಇಂತೆಂದು
ಪಥ್ಯದ ವಚನವ ಪೇಳಿದಳು ॥

ರಾಣನ ರೋಷವು ಹೆಚ್ಚಿತು; ಕಣ್ಣೊಳು ರಕ್ತದ ಕಿಡಿಗಳು ಹಾರಿದವು.
ಕತ್ತಿಯನೆತ್ತುತೆ 'ಈಗಳೆ ನಿನ್ನನು ವಧಿಸುವೆನೆ'ನ್ನುತ ಗುಡುಗಿದನು.
ಆಗಲ್ ತೊಟ್ಟಿಲ ನಿದ್ದೆಯ ಸೊಗದಲಿ ಪನ್ನೆಯ ಪುತ್ರನು ಕನವರಿಸಿ,
'ಛೋಟಾ ರಾಣನು ನಾನೆಲೆ, ಖೂಳಾ! ಬಾರೆಲೆ'ಯೆನ್ನುತ ಪಡಿನುಡಿದ. ॥

ಪನ್ನೆಯು ಸೆಳೆಯುತ ತೊಟ್ಟಿಲ ಸನಿಹಕೆ ಬಂದನು ಖೂಳನು ವನವೀರಾ
ಕತ್ತಿಯನೆತ್ತುತ, ರಭಸದಿ ತಿರ್ರನೆ ತಿರಿಗಿಸಿ ಮೇಲಕೆ ಹಾರಿಸುತ.
ಪನ್ನೆಯ ಪುತ್ರನ ಕುಸುಮದ ಕೋಮಲಹೃದಯದ ಲಘುತರ ಮಧ್ಯದೊಳು
ತಿವಿದನು ಮೂರ್ಖನು ಹೃದಯದ ಮಧುವದು ಚಿಳ್ಳನೆ ಮೇಲಕೆ
ಹಾರಲದು. ॥

ಮಾವಾರ್, ಮೊವಾರ್, ಮಮ ಹೇ ಮಾವಾರ್! ಎನ್ನುತ ದೈನ್ಯದಿ
ಮೊರೆಯಿಟ್ಟು
ಪನ್ನೆಯ ಪುತ್ರನು ಅಸುಗಳ ತೊರೆದನು ಕನಸಿನ ನನಸೊಳು ಸುಖದಿಂದ
ನಿರ್ಮಲರಕುತದಿ ಕೈಯನು ಮುಳುಗಿಸಿ, ಖೂಳನು ಅಲ್ಲಿಂದೊರವಂಟ
ಆಶೆಗೆ ಫಲಿಸಿದ ರಕ್ತದ ದೃಶ್ಯವ, ಮನಸಿನ ಪಟದಲಿ ಲೇಖಿಸುತ. ॥

ದುಃಖದ ಪನ್ನೆಯು ಕಂಬನಿ ಮಿಡಿಯುತ ತೊಟ್ಟಿಲ ಮೇಲಕೆ ಬಾಗುತಲಿ,
ಪುತ್ರನ ಬಿರಿಯದ ನಸುನಗು ಮುಗುಳಿನ ಮೊಗವನು ಮುದ್ದಿಸಿ ದುಃಖದಲಿ,
ಅನುಪಮಕೃತ್ಯವ ಮಾಡಿದ ಪುತ್ರಗೆ ಚರಮದ ಮಾತಿನ ಗೀತೆಯನು
ಮೋದದಿ ಪಾಡುತ ಮೂರ್ಛೆಯ ಪೋದಳು ಕಂದನ ಗುಣಗಳ ನೆನೆನೆನೆದು॥

ಇನ್ನು, ಜಗದ ಹೃದಯದಲ್ಲಿ
ದೇಶಭಕ್ತಿ ಮೂಡುವಂದು
ಸ್ಮರಣೆಯೊಳಗೆ ನಿನ್ನ ಸೇವೆ
ಬರಲಿ ವೀರನೆ ॥

ಜನರು, ಮಾತೃದೇಶಕಾಗಿ
ಸತ್ಯಪಂಥ ಪಿಡಿದು ಮುಂದೆ
ಅಸುವ ತೊರೆದ ವೀರಬಾಲ
ನೆಂದು ಪಾಡಲಿ ॥

## XVIII. ಪಾಲುಮಾರಿಕೆ.

ಯಾವಳೊಬ್ಬ ಹಾಲುಗಿತ್ತಿ
ಹಾಲ ಕೊಡವ ತಲೆಯೊಳೆತ್ತಿ
ಹೊಳೆಯಾಚೆಗೆ ಕಡೆಯಲೊತ್ತಿ
  ಕಡಕೆ ಬಂದಳು.

ತಡವಿಸಿಸಿರೆ ಕಡವ ತೆರೆಯೆ,
ಕೊಡವನಿಳಿಸಿ ನೀರನೆರೆಯೆ,
ಹಾಲಿನರಕೆ ನೆರೆದು ಸೊರೆಯೆ
  ತುಂಬಿತಾ ಕೊಡಂ.

ಅವಸರದಿಂ ದೋಣಿ ಹತ್ತಿ
ಕುಳಿತಳಾಕೆ ಬಾಣಿಗೊತ್ತಿ;
ತಿರುಗಲಂಬಿ ಹಗಲು ಮುತ್ತಿ-
  ತಾಕೆಯ ಮೊಗದಿ.

ಮುಂಬಿಸಿಲಲಿ ಬೆವರು ತುರುಗೆ,
ಸೂಸಿತು ಕಿರುನಗೆಯ ನಿರಿಗೆ—
ಜಾಲಾಕ್ಷದಿ ನುಸುಳಿ ಹೊರಗೆ
  ಸುಳಿವ ಗಾಳಿಯೊ?

ಅನಿಬರ ಗಂಡಸರ ಮುಂತು
ಮೊಗವ ತೋಳೆಯದಿರುವಳೆಂತು?
ಸೆರಗ ಸರಿಸಿ ನಿರಿಯೊಳಾಂತು
  ತೊರೆಗೆ ಬಗ್ಗಲು,

ಸಡಳಿದ ತಿರುಗಣೆಯ ತಿಳಿಯ-
ದವಳ ಬಲದ ಕಿವಿಯ ಗಿಳಿಯ-
ವಾಲೆ ಜುಗುಳುವೊಡನೆ ಹೊಳೆಯ
  ಗುಳುಗುಳೊರೆದುದು.

ಕಿವಿಯ ಮುಟ್ಟಲೋಲೆಯಿಲ್ಲ!
ಕಿವಿಯೆ ಕುಸಿದು ಕೆಡೆದುದಲ್ಲ!
ಕಣ್ಣಿಗುಕ್ಕುವೆದೆಯ ಗುಲ್ಲ
ನಿಂತು ಹುಯ್ದಳು—

'ಇದ್ದುದೆಲ್ಲ ಪೋದುದಲ್ಲ!
ಮನದ ನೆಲುಹು ಹರಿದುದಲ್ಲ!
ದೇವರೆ, ಕೈಯ್ಬಿಟ್ಟೆಯಲ್ಲ
ನಟ್ಟನೀರಲಿ!

'ಪೋದುದೆ ಕಟ ಕಣ್ಣಮುಂದೆ?
ಸೀರೆ ನನ್ನಸದ್ದಿ ಕೊಂದೆ!
ಗಳಿಸಿದೆನೇನ್ನೀರಿಗೆಂದೆ
ವಾಲೆಯಿದನ್ನ?

'ಅಮ್ಮನೆನಗೆ ಕೊಟ್ಟುದಲ್ಲ,
ಗಂಡನಿದಂ ಕೊಂಡುದಲ್ಲ,
ಅಕಟ ನಾನೆ ದುಡಿದೆನಲ್ಲ
ಮೆಯ್ಯ ಮುರಿತದಿಂ?

'ಗೊಲ್ಲರೆಮ್ಮ ಪಾಳ್ಯದಲ್ಲಿ
ನನ್ನೊಬ್ಬಳ ಕಿವಿಗಳಲ್ಲಿ
ಅಲ್ಲದೆ ಮತ್ತಾರಿಗಲ್ಲಿ
ಇಂತಹ ವಾಲೆ?

'ಇದರ ಚಿನ್ನದೇನು ಬಣ್ಣ?
ಕೆತ್ತನೆಯಿದರಾರ ಕಣ್ಣ
ಕುಕ್ಕದು? ಪಡೆದೆದೆಯ ಹುಣ್ಣ
ಬೆಲೆಯ ತೆತ್ತೆನೆ?

'ಯಾವ ಕೆಟ್ಟ ಶನಿಯೊ ಕಣ್ಣಿ
ಕಟ್ಟುತ ತನಿಸುಖದ ಗಿಣ್ಣ
ಮುಕ್ಕುವೆನ್ನ ಬಾಯ್ಗೆ ಮಣ್ಣ
ನಕಟ ಹೆಟ್ಟಿತು?

'ನಾದಿನಿ ಇದನೆರೆಯಲೊಂದು
ದಿನಕಿತ್ತೆನೆ ಅವಳಿಗಿಂದು?
ನತ್ತೆ ಕರಿಯ ಕೊತ್ತಿಗೆಂದು
ಮನದಿ ನಕ್ಕನೆ?

'ಹರಿದೆನಾರ ವಾಲೆಯನ್ನ
ಮುನ್ನ ಹುಟ್ಟೊಳಲ್ಲಡೆನ್ನ
ಹಾಲೆ ಹರಿವ ಹರಕೆಯನ್ನ
ಹೊಳೆಗೆ ಹೊತ್ತೆನೆ?

'ಯಾರ ಸೊಟ್ಟ ಮೋರೆಯನ್ನ
ಕಂಡೆನೊ ಹೊತ್ತಾರೆಯನ್ನ?
ಜೀವಕೆ ಗಂಟಿಕ್ಕಿದೆನ್ನ
ತೊಡವೆ ಪೋದುದೆ?

'ಕಳೆದು ಹೋದ ವಾಲೆಗಳಲೊ?
ಅಣಕುವ ನೆರೆಯವರಿಗಳಲೊ?
ತವರಂ ತಿವಿವತ್ತೆಗಳಲೊ?
ನನಗಾನಳಲೊ?

'ಇನ್ನೆನಗಿದು ಬರುವುದುಂಟೆ?
ಬರಿದಿನ್ನೇಕಿದರ ತಂಟೆ?
ತಿರುಪತಿಯಲಿ ಹಣದ ಗಂಟೆ
ಕಡಲಿಗೊಗೆಯರೆ?'

ಮನಸಿನ ತನೆ ಕರಗಲಿಂತೆ
ಯಾರ ಮನಂ ಕೊರಗದಂತೆ?—
ಹಾಲುನಗೆಗೆ ಹನಿಯೆ ಚಿಂತೆ
ಹೆಪ್ಪುಗೊಳಿಸದೆ?

ಮೊಳಕಾಲಲಿ ಮೊಗವನೂರಿ
ಕುಳಿತಳಾಕೆ ತರಿಯು ಗೀರಿ;
ದಿನಮುಖದೆಲೆವನಿಯೊ? ಸೋರಿ
ತಾಕೆಯುಂಬಕಂ.

ದೋಣಿಯಿಲ್ಲ ಮರುಗಿತಲ್ಲಿ—
ನುಡಿಗಳ ಬಾಯ್ಮುರುಕವೆಲ್ಲಿ?
ಜಲ್ಲೆ ತಗಲದಾಳವೆಲ್ಲಿ?
ಓಡವೋಡಿತು.

ತೊರೆಯುನೊಬ್ಬ ರಸಿಕನಂತೆ,
ನಗುತ ನುಡಿದನವಳಿಗಿಂತೆ—
'ಹೆರರ ಚಿಂತೆ ನಗೆಯ ಸಂತೆ
ಯಾರಿಗೊಲ್ಲದು?

'ಏತಕಮ್ಮ ಬರಿದೆ ಚಿಂತೆ?
ಹೂವೆಯನಿತೆ ನನೆಯಿನಿಂತೆ;
ದುಡಿದಂತೆಯೆ ದುಡಿವೆಯಂತೆ—
ಹರೆಯುವಿಲ್ಲವೆ?

'ಊರೊಳಿರಲು ನೀರಿನೊರತೆ
ಚಿನ್ನಕೆ ನಿನಗೇನು ಕೊರತೆ?
ಹಾಲಿಗೈಸೆ ನೀರ ಬೆರತೆ
ಎಣ್ಣೆ ತುಪ್ಪಕೇಂ?

'ನೀರಿಗಾಯ್ತು ನೀರ ಪಾಲು,
ಉಳಿದುದಿನ್ನು ಹಾಲ ಪಾಲು;
ಗೆಯ್ದು ಗೆಯ್ಮೆ ತನ್ನ ಪಾಲು
ಕೊಳ್ಳದಿರುವುದೆ?'

## XIX. ಧ್ರುವ.

ಸುನೀತಿ ದೇವಿ । ನಿದ್ದೆ ತಿಳಿದು ಎದ್ದು ಕುಳಿತಳು ।
ಸುನೀತಿ ದೇವಿ । ನಿದ್ದೆ ತಿಳಿದು ಎದ್ದು ಕುಳಿತಳು ॥ ಪಲ್ಲ ॥

ಎದ್ದು ಕುಳಿತು ಹೊದ್ದ ಸೆರಗ ।
ಸರಿಸಿ ಮುದ್ದು ಮಗನ ಕಡೆಗೆ ।
ಕೈಯ ಚಾಚಿ ಕಾಣದಾದಳು ॥
ಮಗನ ಕಡೆಗೆ—
ಕೈಯ ಚಾಚಿ ಕಾಣದಾದಳು ॥ ೧ ॥

ತರಳ ನಿದ್ದೆಗಣ್ಣಿನಲ್ಲಿ ।
ಉರುಳಿ ಮುಂದೆ ಹೋದನೆಂದು ।
ತಿಳಿದು ಸರಿದು ಸರಿದು ನೋಳ್ಪಳು ॥
ನೆಲಕೆ ಕೈಯ—
ಸವರಿ ಮಗನ ಕಾಣದಾದಳು ॥ ೨ ॥

ಏಳ ಬೀಳುತೆದ್ದು ದೀಪ ।
ಹಚ್ಚಿ ನಾಲ್ಕು ಮೂಲೆ ನೋಡಿ ।
ಮಗನ ಮೋರೆ ನೋಡದಾದಳು ॥
ಹುಡುಕಿ ಹುಡುಕಿ—
ಮಗನ ಮೊಗವ ಕಾಣದಾದಳು ॥ ೩ ॥

ಕಣ್ಣು ತುಂಬ ನೀರ ತಂದು ।
ಕೊರಲ ಸೆರೆಯು ಉಬ್ಬಿ ಬರಲು ।
ಹೊರಟು ಮೂಕಳಂತೆ ನಡೆದಳು ॥
ಸುನೀತಿ ಎದ್ದು—
ಮನೆಯ ಬಿಟ್ಟು ಹೊರಗೆ ನಡೆದಳು ॥ ೪ ॥

ತೋಟ-ಪಟ್ಟಿ ಹಳ್ಳ-ಕೊಳ್ಳ ।
ಬಾವಿ-ಕೆರೆಗಳಲ್ಲಿ ನೋಡಿ ।
ಕೇರಿ ಕೇರಿ ತಿರುಗಿ ನೋಳ್ಪಳು ॥
  ಹಿಂದಕೊಮ್ಮೆ—
ಮುಂದಕೊಮ್ಮೆ ಹೊರಳಿ ನೋಳ್ಪಳು ॥ ೫ ॥

"ಅಲ್ಲಿ ಇರುವನೇನೋ ತರಳ? ।
ಎಲ್ಲಿ ಇರುವನೇನೋ ಕಂದ?" ।
ಎಂದು ಮುಂದೆ ಮುಂದೆ ಹೊರಟಳು ॥
  'ಬಿಸಿಲುಗುದುರೆ—
ಹಿಂದೆ ಚಿಗರಿಯಂತೆ' ನಡೆದಳು ॥ ೬ ॥

ಮುಂದೆ ಹೋಗಿ ಮತ್ತೆ ಮನಸಿ— । *
ನಲ್ಲಿ-'ಮಗನು ಮನೆಗೆ ಹೋಗಿ ।
ಮಲಗಿಕೊಂಡನೇನೋ' ಎಂದಳು ॥
  ಜೋಕಾಲಿಯಂತೆ-
ತೂಗಲಾಡಿ ಬಾಲೆ ದಣಿದಳು ॥ ೭ ॥

'ಸಣ್ಣ ಕೂಸು! ಐದು ವರ್ಷ ।
ತುಂಬಲಿಲ್ಲ ಇನ್ನು ತನಕ ।
ಎನ್ನ ಕೂಸು, ಎಲ್ಲಿ ಹೋಯಿತು ॥
  ಸಣ್ಣ ಗಿಣಿಯು—
ಕತ್ತಲಲ್ಲಿ ಎಲ್ಲಿ ಹಾರಿತು ॥ ೮ ॥

ದೇವರಿನಗೆ ರೆಕ್ಕೆಗಳನು ।
ಜೇಗೆಯಂಥ ಕಣ್ಣುಗಳನು ।
ಯೋಗಿಯಂಥ ಮನವ ಕೊಡುವನೇ? ॥
  ಕೊಟ್ಟರೀಗ—
ಮುಗಿಲನೇರಿ ನೋಡಿ ಬರುವೆನೇ? ॥ ೯ ॥

ಎಂದು ಹಲಬಿ ಹಂಬಲಿಸುವ ।
ತಾಯಿ ಜೋಲು ಮೋರೆ ಹಾಕಿ ।
ಹುಚ್ಚಳಂತೆ ಕುಳಿತು ಬಿಟ್ಟಳು ॥
    ಮುಂದಿಮಕ್ಕ—
ಳಳುವ ಕೇಳಿ ಕಣ್ಣ ತೆರೆದಳು ॥ ೧೦ ॥

ಗಿಡವೆ ಧ್ರುವನು, ದನವೆ ಧ್ರುವನು ।
ಕಲ್ಲೆ ಧ್ರುವನು, ಸೊಲ್ಲೆ ಧ್ರುವನು ।
ಎಲ್ಲ ಕಡೆಗೆ ಧ್ರುವನ ಭ್ರಾಂತಿಯೇ ॥
    ಸುನೀತಿಯಲ್ಲಿ—
ಮೂಡಿತಿಂದು ಧ್ರುವನ ಭ್ರಾಂತಿಯೇ ॥ ೧೧ ॥

## XX. ಕಾಗೆಯ ಆಶೆ.

ಗಱಿಯು ಕೆದರಿ ಬಂದಿತಂತೆ.
ಮೆಲ್ಲನದನು ಬೀಸಿತಂತೆ.
ತಲೆಯ ಜುಟ್ಟು ತೂಗುವಂತೆ,
ನವಿಲು ಮೆರೆದು ಕುಣಿಯಿತಂತೆ.

ಬೆಕ್ಕಿನಂತೆ ಕೂಗಿತಂತೆ.
ಮುಗಿಲು ಆಗ ಗುಡುಗಿತಂತೆ.
ಹಾವ ಹಿಡಿದು ತಿರಿಗಿಯಂತೆ.
ನಲಿದು ನಲಿದು ಕುಣಿಯಿತಂತೆ.

ಬಾಲರೆಲ್ಲ ಬಂದರಂತೆ.
ಹಣ್ಣನೆಲ್ಲ ಸುರಿದರಂತೆ.
'ತಿನ್ನು ನವಿಲೆ' ಎಂದರಂತೆ.
ನವಿಲು ಬಹಳ ಕುಣಿಯಿತಂತೆ.

ನವಿಲಿನಂತೆ ಹುಡುಗರಂತೆ,
ಕುಣಿದು ಕುಣಿದು ಸೋತರಂತೆ.
ಆಗ, ಗಾಳಿ ಬೀಸಿತಂತೆ.
ಸೋನೆ ಮಳೆಯು ಬಿದ್ದಿತಂತೆ.

ಕಾಗೆಗೊಂದು ಆಶೆಯಂತೆ—
ನವಿಲಿನಂತೆ ಮೆರೆಯುವಂತೆ.
ನವಿಲ ಗರಿಯ ಕದ್ದಿತಂತೆ;
ಮೈಯ ತುಂಬ ಧರಿಸಿತಂತೆ.

'ನಾನು ನವಿಲು' ಎಂದಿತಂತೆ.
'ನವಿಲು ನಾನು' ಎಂದಿತಂತೆ.
ಮೋಡವೆಲ್ಲ ಹೋಯಿತಂತೆ.
ಬಹಳ ಬಿಸಿಲು ಕಾಯಿತಂತೆ.

ಬಾಲರೆಲ್ಲ ಬಂದರಂತೆ,
'ಎಲ್ಲಿ? ಎಲ್ಲಿ?' ಎಂದರಂತೆ.
ನೋಡಿ ನೋಡಿ ನಕ್ಕರಂತೆ.
ಕಬೆಯ ಹಿಡಿದು ನಿಂತರಂತೆ.

ಕಾಗೆ ಮೇಲೆ ಹಾರಿತಂತೆ.
ಹಾರಿ ಹಾರಿ ಬಳಲಿತಂತೆ.
ಕಾಣದಂತೆ ಹೋಯಿತಂತೆ.
ಹುಚ್ಚು ಹುಚ್ಚು ಕಾಗೆಯಂತೆ.

## XXI. ನೀತಿಗಳು.

ಅಡಿಯ ಮುಂದಿಡೆ, ಸ್ವರ್ಗ; ಅಡಿಯ ಹಿಂದಿಡೆ, ನರಕ;
ಅಡಿಗಶ್ವಮೇಧಫಲ, ಸ್ವಾಮಿಕಾರ್ಯಕ್ಕೆ
ಮಡಿಯಲೇ ಬೇಕು! ಸರ್ವಜ್ಞ.

ಗುರುವ ನಿಂದಿಸಬೇಡ; ಪರರ ಹಳಿಯಲು ಬೇಡ;
ಬರೆವರ ಕೂಡೆ ಹಗೆ ಬೇಡ; ಬಂಗಾರ
ಎರವು ತರಬೇಡ. ಸರ್ವಜ್ಞ.

ಅನ್ನವನು ಇಕ್ಕುವುದು; ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದಡೆ; ಕೈಲಾಸ
ಬಿನ್ನಣವಕ್ಕು. ಸರ್ವಜ್ಞ.

ಉಳ್ಳಾಗ ಉಣಲಿಲ್ಲ, ಉಳ್ಳಾಗ ಉಡಲಿಲ್ಲ,
ಉಳ್ಳಾಗ ದಾನಕೊಡಲೊಲ್ಲದವನೊಡವೆ
ಕಳ್ಳಗೆ ನೃಪಗೆ. ಸರ್ವಜ್ಞ.

ಕೋಪವೆಂಬುದು ಕೇಳಿ! ಪಾಪದ ನೆಲೆಗಟ್ಟು;
ಕೂಪದೊಳು ನೇಣು ಹರಿದಂತೆ, ನರಕಕ್ಕೆ
ಕೋಪಿ ತಾನಿಳಿವ. ಸರ್ವಜ್ಞ.

ಅಂತಿದ್ದ, ಇಂತಿದ್ದ, ಎಂತಿದ್ದನೆನಬೇಡಿ!
ಕುಂತಿಯ ಮಕ್ಕಳು ತಿರುದುಣೆ, ಮಿಕ್ಕವರು
ಎಂತಿದ್ದರೇನು? ಸರ್ವಜ್ಞ.

ಊರಿಗೆ ದೊರೆಯು ರೂಪು; ನಾರಿಗೆ ಗುಣವು ರೂಪು;
ಚಾರು ಕೋಗಿಲೆಗೆ ಸ್ವರ ರೂಪು; ಮನುಜಗೆ
ಧೀರತ್ವ ರೂಪು; ಸರ್ವಜ್ಞ.

## XXII. ಕುಲ.

ಯಾವ ಕುಲವು । ಸ್ವಾಮಿ । ತಿಳಿಯಬಾರದು

ಕಡಲ ಮಗಳ ಗಂಡನಂತೆ
ಅಡವಿಯೊಳಗೆ ಮಡದಿಯಂತೆ
ಪೊಡವಿಗೆ ತಾನೊಡೆಯನಂತೆ
ಕೊಡೆಯ ಪಿಡಿದು ಬೇಡಿದನಂತೆ
ಯಾವ ಕುಲವು । ಸ್ವಾಮಿ । ತಿಳಿಯಬಾರದು ॥ ೧ ॥

ರಕ್ಕಸರಲ್ಲಿ ಕಾಳಗವಂತೆ
ಮರ್ಕಟರೆಲ್ಲ ಬಂಟರಂತೆ
ಪಕ್ಷಿವಾಹನದಿ ಮೆರೆದನಂತೆ
ಮುಕ್ಕಣೇಶ್ವರ ಮೊಮ್ಮಗನಂತೆ
ಯಾವ ಕುಲವು । ಸ್ವಾಮಿ । ತಿಳಿಯಬಾರದು ॥ ೨ ॥

ವಿದ್ಯದಲ್ಲಿ ಪ್ರೌಢನಂತೆ
ಯುದ್ಧದಲ್ಲಿ ಶೂರನಂತೆ
ಕದ್ದು ಬೆಣ್ಣೆಯ ತಿಂದನಂತೆ
ಮುದ್ದು ಪುರಂದರ ವಿಠಲನಂತೆ
ಯಾವ ಕುಲವು । ಸ್ವಾಮಿ । ತಿಳಿಯಬಾರದು ॥ ೩ ॥

## XXIII. ಪ್ರಾಚೀನ ಕರ್ಮ.

ಪ್ರಾಚೀನ ಕರ್ಮವಿದು ಬಿಡಲರಿಯದು
ಯೋಚನೆಯ ಮಾಡಿ ಬಳಲುವುದೇಕೆ ಮನುಜ ॥ ಪಲ್ಲವಿ ॥

ಸೇತುವನು ದಾಟಿ ಲಂಕೆಗೆ ಪೋಗಿ ಹನುಮಂತ
ಪ್ರೀತಿಯಲಿ ರಾವಣನ ಪುರವನಳಿದಾ
ಸೀತೆಯನು ಕಂಡು ಶ್ರೀರಾಮನಿಗೆ ಪೇಳಿದರೆ
ಪ್ರೀತಿಯಲಿ ರೂಪವನು ಕೊಡಲಿಲ್ಲ ಹರಿಯು ॥

ಲೋಕಗಳಲೀರೇಳು ತಿರುಗುವಾ ರವಿರಥಕೆ
ಏಕಗಾಲಿಯು, ಏಳು ಕುದುರೆಯಿಂದಾ!
ಆಕಾಶ ಮಾರ್ಗದಲಿ ತಿರುಗುವಾ ಅರುಣನಿಗೆ
ಬೇಕೆಂದು ಚರಣಗಳ ಕೊಡಲಿಲ್ಲ ಹರಿಯು ॥

ಸಾಸಿರನಾಮದೊಡೆಯಾದಿಕೇಶವನನ್ನು
ಬೇಸರದೆ ಹೆಗಲ ಮೇಲಿಟ್ಟುಕೊಂಡು,
ದೇಶಾದಿದೇಶಗಳ ತಿರುಗುವಾ ಗರುಡನಿಗೆ
ನಾಸಿಕದ ಕೊನೆ ಡೊಂಕ ತಿದ್ದಲಿಲ್ಲ ಹರಿಯು ॥

---

## XXIV. ಮಾಯೆ.

ನೀ ಮಾಯೆಯೊಳಗೊ, ನಿನ್ನೊಳು ಮಾಯೆಯೊ, ।
ನೀ ದೇಹದೊಳಗೊ ನಿನ್ನೊಳು ದೇಹವೊ ಕೃಷ್ಣಾ? ॥ ಪಲ್ಲ ॥

ಬಯಲು ಆಲಯದೊಳಗೊ, ಆಲಯವು ಬಯಲೊಳಗೊ, ।
ಬಯಲು ಆಲಯವೆರಡು ನಯನದೊಳಗೊ? ॥
ನಯನ ಬುದ್ಧಿಯ ಒಳಗೊ, ಬುದ್ಧಿ ನಯನದ ಒಳಗೊ, ।
ನಯನ ಬುದ್ಧಿಗಳೆರಡು ನಿನ್ನೊಳಗೊ ಕೃಷ್ಣಾ? ॥

ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ, ।
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ? ॥
ಜಿಹ್ವೆ ಮನಸಿನ ಒಳಗೊ, ಮನಸು ಜಿಹ್ವೆಯ ಒಳಗೊ, ।
ಜಿಹ್ವೆ ಮನಸುಗಳೆರಡು ನಿನ್ನ ಒಳಗೊ ಕೃಷ್ಣಾ? ॥

ಕುಸುಮ ಗಂಧದ ಒಳಗೊ, ಗಂಧ ಕುಸುಮದ ಒಳಗೊ, ।
ಕುಸುಮ ಗಂಧಗಳೆರಡು ಮೂಗಿನೊಳಗೊ? ॥
ಅಸಮಭವ ಶ್ರೀ ಕಾಗಿನೆಲೆಯಾದಿಕೇಶವನೆ ।
ಉಸುರಲೆನಗಳವಲ್ಲ ಎಲ್ಲ ನಿನ್ನೊಳಗೊ ॥

## XXV. ದಾಸರ ಹಾಡು.

ಮೋಸದಿ ಜೀವಿಯ ಘಾಸಿಯ ಗೈದುದು
ಕಾಶಿಗೆ ಹೋದರೆ ಹೋದೀತೇ?
ಭಾಷೆಯ ಕೊಟ್ಟು, ನಿರಾಶೆಯ ಪಡಿಸಲು,
ಮೋಸವ ಮಾಡದೆ ಬಿಟ್ಟೇತೇ?

ಸತ್ಯದ ಧರ್ಮವ ನಿತ್ಯವು ಬೋಧಿಸೆ,
ತೊತ್ತಿನ ಮನಸಿಗೆ ಸೊಗಸೀತೇ?
ತತ್ವದ ಸಾರ ವಿಚಿತ್ರದಿ ಪೇಳಲು,
ಕತ್ತೆಯ ಮನಸಿಗೆ ತಿಳಿದೀತೇ?

ಪುತ್ಥಳಿ-ಬೊಂಬೆಯ ಚಿತ್ರದಿ ಬರೆದರೆ,
ಮುತ್ತನು ಕೊಟ್ಟರೆ ನುಡಿದೀತೇ?
ಎತ್ತನು ಕೇಳಿದರೊತ್ತೆಗೆ ಹಣವ
ನ್ನಿತ್ತು, ವಿಶೋಕವ ಮಾಡೀತೇ?

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೇ?
ತಾಯನು ನಿಂದಿಸಿ ನೋಯಿಸುತಿರುವ-
ನ್ಯಾಯಿಗೆ ಮುಕುತಿಯು ದೊರಕೀತೇ?

ಬಾಯಿಯ ಕೊಬ್ಬಿಂ ಬೈಯುವ ಮನುಜಗೆ
ಘಾಯವು ತಾಗದೆ ಬಿಟ್ಟೀತೇ?
ಮಾಯೆಯು ಮನದೊಳಪಾಯವ ಗೈವಗೆ
ಕಾಯದ ಕಷ್ಟವು ತೊಲಗೀತೇ?

## XXVI. ಸೋಮೇಶ್ವರಶತಕ.

ಕೊಡಬೇಕುತ್ತಮನಾದವಂಗೆ ಮಗಳಂ, ಸತ್ಪಾತ್ರದೊಳ್ ದಾನಮಂ; ।
ಇಡಬೇಕೀಶ್ವರನಲ್ಲಿ ಭಕ್ತಿರಸಮಂ, ವಿಶ್ವಾಸಮಂ ಸ್ವಾಮಿಯೊಳ್; ॥
ಬಿಡಬೇಕೈ ಧನಲೋಭಮಂ ಸ್ವಜನರೊಳ್, ಮಹಾತ್ಮರೊಳ್ಗೋಷ್ಠಿಯಂ; ।
ಇಡಬೇಕಿದ್ದುಣಬೇಕೆಲೈ! ಹರಹರಾ ಶ್ರೀಚನ್ನ ಸೋಮೇಶ್ವರಾ ॥ ೧ ॥

ರವಿಯಾಕಾಶಕೆ ಭೂಷಣಂ, ರಜನಿಗಂ ಚಂದ್ರಂ ಮಹಾಭೂಷಣಂ, ।
ಕುವರಂ ವಂಶಕೆ ಭೂಷಣಂ, ಸತಿಗೆ ಪಾತಿವ್ರತ್ಯವೇ ಭೂಷಣಂ, ॥
ಹವಿ ಯಜ್ಞಾಳಿಗೆ ಭೂಷಣಂ, ಸರಸಿಗಂಭೋಜಾತಗಳ್ ಭೂಷಣಂ ।
ಕವಿಯಾಸ್ಥಾನಕೆ ಭೂಷಣಂ. ಹರಹರಾ ಶ್ರೀಚನ್ನ ಸೋಮೇಶ್ವರಾ ॥ ೨ ॥

ಉಡುರಾಜಂ ಕಳೆಗುಂದಿ ಪೆರ್ಚದಿಹನೇ? ನ್ಯಗ್ರೋಧ ಬೀಜಂ ಕೆಲಂ ।
ಸಿಡಿದುಂ ಪೆರ್ಮರವಾಗದೇ? ಎಳೆಗರುಂ ಎತ್ತಾಗದೇ ಲೋಕದೊಳ್? ॥
ಮಿಡಿ ಪಣ್ಣಾಗದೆ? ದೇವರೊಲ್ಮೆಯುದಿರಲ್ ಕಾಲಾನುಕಾಲಕ್ಕೆ ತಾಂ ।
ಬಡವಂ ಬಲ್ಲಿದನಾಗನೇ? ಹರಹರಾ ಶ್ರೀಚನ್ನ ಸೋಮೇಶ್ವರಾ ॥ ೩ ॥

ಒರೆ ದಾರಿದ್ರ್ಯದಿ ದ್ರೋಣನಂ ದ್ರುಪದ ಪೂರ್ವಸ್ನೇಹದಿಂ ಕಂಡನೇ? ।
ಕುರು ಭೂಪಾಲನು ಪಾಂಡುಪುತ್ರರ ಮಹಾಧರ್ಮಾತ್ಮರೆಂದಿತ್ತನೇ? ॥
ಹರಿಯಂ ತಂಗಿಯ ಬಾಲನೆಂದು ದಯೆಯಿಂ ಕಂಸಾಸುರಂ ಕಂಡನೇ? ।
ದೊರೆಗಳ್ಗೆತ್ತಣ ನೆಂಟರೈ! ಹರಹರಾ ಶ್ರೀಚನ್ನ ಸೋಮೇಶ್ವರಾ ॥ ೪ ॥

ಕವಿಯೇ ಸರ್ವರೊಳುತ್ತಮಂ, ಕನಕವೇ ಲೋಹಂಗಳೊಳ್ ಶ್ರೇಷ್ಟ, ಜಾ ।
ಹ್ನವಿಯೇ ತೀರ್ಥದೊಳುನ್ನತಂ, ವಸನದೊಳ್ ಶುಭ್ರಾಂಬರಂ ವೆಗ್ಗಳಂ ॥
ರವಿಯೆಲ್ಲಾ ಗ್ರಹಕಂ ವರಂ, ರಸಗಳೊಳ್ ಶೃಂಗಾರವೇ ಬಲ್ಮೆ, ಕೇಳ್ ।
ಶಿವನೇ ದೈವ ಜಗಂಗಳೊಳ್. ಹರಹರಾ ಶ್ರೀಚನ್ನ ಸೋಮೇಶ್ವರಾ ॥ ೫ ॥

## XXVII. ರಾಮಾಯಣ ಮಹಾತ್ಮ್ಯ.

ಧರೆಯೊಳು ಶ್ರೀ ರಾಘವೇಂದ್ರನ
ಚರಿತ ಶತಕೋಟಿ ಪ್ರವಿಸ್ತರ
ವರಮಹಾ ಚಾರಿತ್ರ ರಚನಾಸುಪ್ರಬಂಧದಲಿ ।
ಪರಮಭಕ್ತಿಯೊಳಾವನೊಂದ—
ಕ್ಷರವ ಕೇಳ್ವನವಂಗೆ ಪಾತಕ
ಹರಿವುದೆಂದು, ಕುಮಾರರಿಗೆ ವಾಲ್ಮೀಕಿ ಮುನಿ ನುಡಿದ ॥

ಭವಭವಾರ್ಜಿತ ದುರಿತಕೋಟಿಯ
ತವಿಸುತಿಹುದೀ ನಾಮ; ಸರಸಿಜ
ಭವಭವಾಚ್ಯುತರಮಲಪದವಿಯನೀವ ಗುಣನಾಮ ।
ಶಿವನ ಮೆಚ್ಚಿನ ನಾಮ; ಗಿರಿಸಂ
ಭವೆಯ ನೇಮದ ನಾಮ; ಸುರನರ
ಭವನ ಪಾವನನಾಮ; ಸೀತಾಪತಿಯ ಸಿರಿನಾಮ ॥

ರಾಮರಾಮೆಂದವನು ಸ್ವರ್ಗದ
ಕಾಮಿನೀಜನರಿಗೊಡೆಯನು. ರಘು
ರಾಮ ರಕ್ಷಿಸು ರಕ್ಷಿಸೆಂದವ ಕಮಲಭವನಹನು ।
ರಾಮಚರಿತಾಮೃತವ ಕೇಳ್ದವ
ರಾಮನಿಗೆ ಸರಿಯಹನು. ಜಗದೊಳು
ರಾಮನಾಮಕೆ ಸರಿಯ ಕಾಣೆನು ಎಂದು ಮುನಿ ನುಡಿದ ॥

ಶಿವನ ನುಡಿಯಿದು; ಸರಸಿರುಹಸಂ
ಭವನ ಮಾತಿದು; ಮುನಿಪ ನಾರದ
ನ ವರ ವಿಶ್ರುತ ವಾಕ್ಯವಿದು; ವಾಲ್ಮೀಕಿ ಮುನಿವರನ ।
ಸವಿಗೊಡುವ ವಾಕ್ಯಾಮೃತಾರ್ಣವ
ದವಿರಳದ ಪಾನೀಯವಿದು; ತ್ರೈ
ಭುವನ ಗಳಿಸಿದ ಪುಣ್ಯವಿದು ರಘುರಾಮ ಚಂದ್ರಕಥೆ ॥

## XXVIII. ತಿರುಕನ ಕನಸು.

ತಿರುಕನೋರ್ವನೂರ ಮುಂದೆ
ಮುರುಕು ಧರ್ಮಶಾಲೆಯಲ್ಲಿ
ಒರಗಿರುತ್ತಲೊಂದು ಕನಸ ಕಂಡನೆಂತೆನೆ ।
ಪುರದ ರಾಜ ಸತ್ತನವಗೆ
ವರ ಕುಮಾರರಿಲ್ಲದಿರಲು,
ಕರಿಯ ಕೈಗೆ ಕುಸುಮಮಾಲೆಯಿತ್ತು ಪುರದೊಳು ॥

ನಡೆದು ಯಾರ ಕೊರಳಿನಲ್ಲಿ
ತೊಡರಿಸುವದೊ ಅವರ ಪಟ್ಟ—
ಕೊಡೆಯರನ್ನು ಮಾಳ್ಪೆವೆಂದು ಬಿಟ್ಟರಲ್ಲಿಯೆ ।
ಒಡನೆ ತನ್ನ ಕೊರಳಿನಲ್ಲಿ
ತೊಡರಿಸಲ್ಕೆ ಕಂಡು ತಿರುಕ
ಪೊಡವಿಯಾಣ್ಮನಾದೆನೆಂದು ಹಿಗ್ಗುತಿರ್ದನು ॥

ಪಟ್ಟವನು ಕಟ್ಟಿ ನೃಪರು
ಕೊಟ್ಟರವಗೆ ಕನ್ಯೆಯರನು
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೇ ।
ಭಟ್ಟನಿಗಳ ಕೂಡಿ ನಲ್ಲ—
ನಿಷ್ಟ ಸುಖದೊಳಿರಲವಂಗೆ
ಹುಟ್ಟಿ ಹೆಣ್ಣು ಗಂಡು ಮಕ್ಕಳಾದವಾಗಲೇ ॥

ಓಲಗದಲಿರುತ್ತ ತೊಡೆಯ
ಮೇಲೆ ಮಕ್ಕಳಾಡುತಿರಲು
ಲೀಲೆಯಿಂದ ಚಾತುರಂಗಬಲವ ನೋಡುತ ।
ಲೋಲನಾಗಿ ನುಡಿದನಿನಿತು
ಕೇಳು ಮಂತ್ರಿ, ಸುತರುಗಳಿಗೆ
ಬಾಲೆಯರನು ನೋಡಿ ಮದುವೆಮಾಡಬೇಕೆಲ್ಕೆ ॥

ನೋಡಿ ಬನ್ನಿರೆನಲು ಜೀಯ
ನೋಡಿ ಬಂದೆವೆನಲು ಬೇಗ
ಮಾಡು ಮದುವೆ ಮಂಟಪದೊಳು ಸಕಲ ಕಾರ್ಯವ ।
ಗಾಢವಾಗಿ ಸಂಭ್ರಮಗಳು
ಮಾಡುತಿದ್ದ ಮದುವೆಗಳನು
ಕೂಡಿದಖಿಳರಾಯರೆಲ್ಲ ಮೆಚ್ಚುವಂದದಿ ॥

ಧನದ ಮದವು ರಾಜ್ಯಮದವು
ತನುಜಮದವು ಯುವತಿಮದವು
ಜನಿತಮಾಗಿ ಕನಸಿನಲ್ಲಿ ಹಿಗ್ಗುತಿರ್ದನು ।
ಅನಿತರೊಳಗೆ ನೃಪರ ದಂಡು
ಮನೆಯ ಮುತ್ತಿದಂತೆಯಾಗೆ
ಕನಸ ಕಾಣುತಿರ್ದು ಹೆದರಿ ಕಣ್ಣ ತೆರೆದನು ॥

## XXIX. ಮಂಗನೂ ಮರದ ತುಂಡೂ.

ಧರೆಯೊಳುತ್ತಮವೆನಿಸಿ ವಿಧವಿಧ
ಮರಗಳಿಂದೊಪ್ಪುತಿಹ ಕಾಶೀ-
ಪುರದೊಳಿದ್ದನು ಬಡಗಿಯೊಬ್ಬನು ಪೂರ್ವಕಾಲದಲಿ ॥
ಇರದೆ, ಕಾಡಿಗೆ ಹೋಗಿ ನಿತ್ಯವು
ಮರವ ಕಡಿಯುತ ತನ್ನ ಹೊಟ್ಟೆಯ
ಹೊರೆದು, ಸುಖದೊಳು ಜೀವಿಸಿದ್ದನು ಬಹಳ ದೈನ್ಯದಲಿ ॥

ಒಂದು ದಿನ ಕಾನನದಿ ವೃಕ್ಷವ-
ನೊಂದು ಖಂಡಿಸಿ ಸಿಗಿಯಲರ್ಧವ-
ನಂದು ಸೂರ್ಯನು ಮುಳುಗಿದನೆನುತ ಬಡಗಿ ಜವದಿಂದಾ ॥
ಮಂದಿರಕೆ ಪೊರಮಡುವ ಸಮಯದೊ
ಳೊಂದು ಕೀಲಿಯನಿಟ್ಟು ಸಂದಿಗೆ,
ಚಂದದಲಿ ಹೊರವಂಟ ತನ್ನಯ ಮನೆಗೆ ತವಕದಲಿ ॥

ಇರಲು, ಒಂದಾನೊಂದು ಮಂಗದ
ಮರಿಯು ತನ್ನಯ ಜನನಿಯೊಂದಿಗೆ
ಬರುತಲಿದ್ದಿತು. ನೋಡಿತಾಕ್ಷಣ ಸಿಗಿದ ವೃಕ್ಷವನು ॥
'ಅರರೆ! ಮಾತೆ, ಇದೇನು ಚೋದ್ಯವು?
ಮರದಿ ಕೀಲಿರಲಿಕ್ಕೆ ಕಾರಣ-
ದಿರವ ಪೇಳೆನಗೆ'ಂದು ಪೇಳಿತು ಮರ್ಕಟದ ಮರಿಯು ॥

'ಮಗನೆ, ಕೇಳೈ! ಎನಗೆ ತಿಳಿಯದು.
ಬಗೆದು ನೀನಾಮರದ ಗೋಜಿಗೆ
ಪೊಗಲು ಬೇಡೈ! ತಿಳಿಯಬಹುದೀ ವೃಕ್ಷದೊಡೆಯನೊಳು ॥
ಜಗದೊಳಗೆ ಬಹು ಕೇಡು ಬರುತಿಹ
ಬಗೆಗೆ ಪೋಗರು ಬುದ್ಧಿವಂತರು.
ಸುಗುಣ ಕಪಿಗಳು ತಾವೆ ತಮ್ಮಯ ಕೆಲಸ ಗೈಯುವವು ॥

ನೋಡಿ ಬಿಡಬೇಕೆಂದು ಮಾತೆಯ
ಕೂಡೆಯಾಡಿತು ಕೂಸು ಮಂಗದ;
ಬೇಡವೆಂದಳು ತಾಯಿ ಮುದ್ದಿನ ಮರಿಗೆ ತಿರುತಿರುಗಿ ॥
ಓಡಿತಾಗಲೆ; ಸೇರಿತಾಗಲೆ
ಕೋಡುಗನು ಮರವನ್ನು; ಬಳಿಕದೆ
ನೀಡಿ ಯತ್ನವ ಮಾಡಿ ಕೀಲಿಯನೆಳೆಯಿತಾಕ್ಷಣದಿ ॥

ಲಟ್ಟಪಟ್ಟನೆ ಸಂದು ಮುಚ್ಚಲು
ಚಟ್ಟೆಯಾಗುತ ಕಪಿಯು, ಕಾಲನ
ಪಟ್ಟಣಕೆ ತೆರಳಿತದು. ನಾನೇನೆಂಬೆನೀ ಕಥೆಯ ॥
ಪುಟ್ಟ ಮಕ್ಕಳೆ! ಹಿರಿಯರಾಡಿದ
ಘಟ್ಟಿ ಮಾತನು ಬಿಟ್ಟು ಕಳೆದರೆ
ಕೆಟ್ಟ ವಾನರಗಾದ ಗತಿ ಸಿಕ್ಕುವುದು ಖಂಡಿತವು ॥

## XXX. ಸ್ಯಮಂತಕದ ಕಥೆ.

ತರಣಿ ತನಗಿತ್ತ ವರರತ್ನವ-
ನಿರದೆ ಕೊರಳಲಿ ಧರಿಸಿ ತನ್ನಯ
ಪುರವರಕೆ ಸತ್ರಾಜಿತನು ಬರುತಿರಲು ವೈಭವದೆ ॥
ಪುರಜನರು ಬೆದಬೆದರಿ ಶ್ರೀಮುರ-
ಹರಗೆ ಬಿನ್ನಹ ಮಾಡಲಾತನು
ತರಣಿಭಕ್ತನು ಬಂದನೆಂದನು ನೋಡಿ ನಸುನಗುತ ॥

ಒಂದು ದಿನ ಆ ರತ್ನವನು ಗೋ-
ವಿಂದನೀ ಸತ್ರಾಜಿತನ ಕರೆ-
ದೆಂದನೀವುದು ಯದು-ನೃಪಾಲಂಗೆಂದೊಡೆಯು ಕೊಡದೆ ॥
ಮುಂದಮತಿ ಧನಲೋಭದಲಿ ನಿಜ-
ಮಂದಿರದಲೇ ಪೂಜಿಸುತ್ತ ಮು-
ಕುಂದನಾಜ್ಞೆಯ ವಿಚಾರಿ ಲೆಕ್ಕಿಸದಿರ್ದನುಬ್ಬಿನಲಿ ॥

ಇರಲು, ಸತ್ರಾಜಿತನ ತಮ್ಮನು
ಧರಿಸಿ ಮಣಿಯನು ಪೋಪನಡವಿಗೆ;
ತುರಗದಲಿ ಮೃಗಯಾ-ವಿಹಾರ-ವಿನೋದದಿಂದಿರಲು ॥
ಅರಸ, ಕೇಳಾ! ಸಿಂಹವಾತನ
ಕೆರಳಿ ಕೊಂದುದು; ಬಳಿಕಲಾ ಕೇ—
ಸರಿಯ ಜಾಂಬವ ಕೊಂದು ಹೊಕ್ಕನು ಮಣಿಸಹಿತ ಬಿಲವ ॥

ಅತ್ತಲರಸಿದರಾ ಪ್ರಸೇನನ
ತೆತ್ತಿಗರು ಸತ್ರಾಜಿತಾದ್ಯರು;
ಸತ್ತ ತಮ್ಮನ ಕಂಡು ಕೃಷ್ಣನ ಮೇಲೆ ಶಂಕಿಸಲು ॥
ಇತ್ತಲಾ ವಾರ್ತೆಯನು ನಿರ್ಮಳ
ಮೂರ್ತಿ ಕೇಳುತ ತನ್ನ ಮೇಲಣ
ಹೊತ್ತವಿಲಗವ ಕಳೆಯೆ ಅಸುರಾಂತಕನು ಹೊರವಂಟ ॥

ಅರಸಿ, ಮುರಹರನೀ ಪ್ರಸೇನನ
ಮರಣ ಸಿಂಹದಲಾದುದನು ಕಂ-
ಡಿರದೆ ಬೆಂಬತ್ತಿದನು ಸಿಂಹದ ಹಜ್ಜೆಯನು ಬಿಡದೆ ॥
ಉರವಣಿಸಿ ಸಿಂಹವದು ವಿಪಿನಾಂ
ತರದೆ ಬಿದ್ದಿಹುದನ್ನು ಕಂಡನು
ಕರಡಿಯುಗುರಿನ ಘಾಯದಲಿ. ಬೆರಗಾದನಸುರಾರಿ ॥

ಸಿಂಹವನು ಕೊಲುವಂಥ ಕರಡಿಯು
ಸಿಂಹವಿಕ್ರಮವೆಂತೆನುತ ನರ-
ಸಿಂಹನೈದಿದನದರ ಹಜ್ಜೆಗೆ ಹಜ್ಜೆಯನು ನಿಲಿಸಿ ॥
ಸಂಹರಣದಪವಾದ-ಶಿಖಿಯ ಸು-
ರಂಹಸದಿ ಬೆಂದು ಬಳಲಿದವನು
ಗಂಹರವ ಸೇರುತ್ತ ಹೊಕ್ಕನು ಋಕ್ಷ ಕುಲಪತಿಯ ॥

ಮುಷ್ಟಿಯುದ್ಧವ ಗೈದನಲ್ಲಿಯೆ,
ಅಷ್ಟವಿಂಶತಿ ದಿವಸ ಪರ್ಯಂ-
ತಿಷ್ಟ ಭಕ್ತನ ಕೂಡೆ ಲೀಲೆಯನಾಡುವಂದದಲಿ ॥
ನಷ್ಟವಾದುದು ಸತ್ವವಾತನ;
ಮುಷ್ಟಿಯುದ್ಧದ ಕರಹತಿಗೆ ನಿ-
ಷ್ಪಿಷ್ಟ ಗಾತ್ರನು ಜಾಂಬವಂತನು ಬಳಲುತಿಂತೆಂದ ॥

'ಆರು, ನೀನೆಲೆ! ವೀರ? ಜೀವರ
ಭೂರಿಸತ್ವಾತ್ಮಕನು ಕೌಸ್ತುಭ—
ಧಾರಿಯೋ ಶಂಕರನೊ ಮೇಣ್ ಸರಸೀರುಹೋದ್ಭವನೋ ॥
ಆರು ತನ್ನೊಡನಕಟ ಕಾದುವ
ವೀರರೀ ಯುಗದೊಳಗೆ? ವಿಸ್ಮಯ—
ಕಾರಿಯಾದೆಯಲಾ' ಎನುತ ನೋಡಿದನು ಮನದೊಳಗೆ ॥

ಮತ್ತೆ ಹರಿ ಕರುಣಿಸಲು ಕಂಡನು
ಚಿತ್ತದಲಿ ರಘುನಾಥನೆಂಬುದ—
ನತ್ಯಧಿಕ ಭಕ್ತಿಯಲಿ ವೈಯಿಕ್ಕಿದನು ಚರಣದಲಿ ॥
ಇತ್ತನಾತನು ಬಳಿಕ ತನ್ನಯ
ಪುತ್ರಿಯನು ಜಾಂಬವತಿಯೆಂಬಳ—
ನತ್ಯಧಿಕ ಗುಣ-ರೂಪ ಸಂಪನ್ನೆಯನು ಮಣಿ ಸಹಿತ ॥

ಕರೆದು ಸತ್ರಾಜಿತನನಾ ಮುರ-
ಹರನು ಸಭೆಯಲಿ ನೆರೆದ ಪೃಥ್ವೀ
ಶ್ವರರ ಬಾಂಧವ-ನಿಕರದೊಡ್ಡೋಲಗದ ಮಧ್ಯದಲಿ ॥
ಹರುಷ ಮಿಗುವಂತೆ ಸ್ಯಮಂತಕ
ವರ-ಮಹಾ-ರತ್ನವನು ಕೊಟ್ಟನು
ಪರಮಧಾರ್ಮಿಕನೆನುತ ಕರುಣಾ-ವನಧಿ ಕೈಮುಗಿದು ॥

---

## XXXI. ಕರ್ಕೋಟಕನ ಕಥೆ.

'ಸಿಲುಕಿದೆನು ಪಾವಕನೊಳೆನ್ನನು
ಒಲಿದು ಹಾ ನೃಪಕುಲಶಿರೋಮಣಿ
ನಳನ! ರಕ್ಷಿಸು, ಸುಕೃತ ನಿನಗಹುದೆ'ಂದುದಾ ನಿನದ ॥
ಆಗಲಾದನಿಗೇಳಿ ನೃಪತಿ ಸ-
ರಾಗದಿಂದಲೆ ಬಂದು ಹೊಕ್ಕನು
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ ।
'ಹೋಗುತಿದೆ ಎನ್ನಸುವು; ಸಲಹು ಷ-
ಡಾಗಮಜ್ಞ ನೃಪಾಲ!' ಎನಲಾ
ಭೋಗಿಯನು ಕಂಡರಸ 'ನೀನಾರೆ'ಂದು ಬೆಸಗೊಂಡ ॥
'ಉರಗಪತಿ ಕರ್ಕೋಟಕನು ನಾ
ನರಸ, ಕೇಳ್ಳೆ! ವನದೊಳಿರುತಿರೆ
ಪರಮ ಋಷಿ ಬಂದೆನ್ನ ತಾಗಿದನಂದು ಖಾತಿಯಲಿ ॥
ಕರೆದು ಕೊಟ್ಟನು ಶಾಪವನು ಸಂ
ಚರಿಸದಂತಿರೆ. 'ಎನಗೆಯಿದು ಪರಿ—
ಹರವದೆಂದಿಗೆ? ಮುನಿಪ, ಕರುಣಿಸು' ಎಂದು ಮೊರೆಯಿಡಲು ॥
'ಇರಲಿರಲು ಕಾಲಾಂತರಕೆ ಭೂ—
ವರನು ನಳನೃಪನಿಲ್ಲಿಗೆಯ್ದುವ.
ಧರಣಿಪನ ಕರಕಮಲ ಸೋಂಕಲು ಶಾಪವಿದು ಬಳಿಕ ॥
ಪರಿಹರಿವುದೆನೆ ಮುನಿಯ ವಚನದಿ
ಬರವ ಹಾರೈಸಿದೆನು. ಬಂದ್ಯೆ!
ಕರುಣದಿಂದಗ್ನಿಯನು ಪರಿಹರಿಸೆಂದ'ನುರಗಪತಿ ॥
ಕರುಣದಲಿ ನೃಪ ಭೀತಿಗೊಳ್ಳದೆ
ಉರಗಪತಿಯನು ತೆಗೆಯುತನಲನ
ಉರಿಯ ತಪ್ಪಿಸಿ, ತಂದು ಸರಸಿಯ ತಡಿಯೊಳುಪಚರಿಸೆ ॥
ಕರವಿಡಿದು ಧರಣಿಪನ ಕಚ್ಚಲು
ಉರವಣಿಸಿ ವಿಷವೇರೆ, ನೃಪತಿಯ
ಪರಮ ತೇಜದ ದೇಹ ಕೆಟ್ಟಿತು ವಿಕೃತರೂಪಾಗಿ ॥

ಅಡ್ಡ ಮೋರೆಯು, ಗಂಟು ಮೂಗಿನ,
ಜಡ್ಡು ದೇಹದ, ಗುಜ್ಜುಗೊರಲಿನ,
ದೊಡ್ಡ ಕೈಕಾಲುಗಳ, ಉದುರಿದ ರೋಮ ಮೀಸೆಗಳ ॥
ದೊಡ್ಡ ಹೊಟ್ಟೆಯು, ಗೂನು ಬೆನ್ನಿನ,
ಗಿಡ್ಡ ರೂಪಿನ, ಹರಕು ಗಡ್ಡದ,
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

ಮಾರನಾಕಾರದ ನೃಪಾಲನು
ಕ್ರೂರರೂಪಾದನು. ಪುರಾಕೃತ
ಮೀರಲಳವಲ್ಲೆಂದು ನುಡಿದನು ತನ್ನ ಮನದೊಳಗೆ ॥
ತೋರ ಮಾಣಿಕವೆಂದು ಪಿಡಿದರೆ
ಭೂರಿಕೆಂಡವಿದಾಯ್ತು. ಹರಹರ!
ಕ್ರೂರ ಜಂತುಗಳೊಡನೆ ಸಖ್ಯವು ಫಲಿಸಿತೆನಗೆಂದ ॥

'ಏಕೆ ನೃಪತಿ, ವೃಥಾ ಮನೋವ್ಯಥೆ?
ಕಾಕ ಬಳಸಲು ಬೇಡ. ನೀನವಿ
ವೇಕಿಯೇ? ಸಾಕಿನ್ನು. ನಿನಗುಪಕಾರನಂಜದಿರು ॥
ಲೋಕ ನಿನ್ನನು ಕಾಣದಂತಿರ-
ಬೇಕೆನುತ ಕಚ್ಚಿದೆನು. ನೃಪಾಲ!
ಶೋಕವೇಕೆಲೆ? ನಿನಗಿದುಪಕಾರವಿದು, ತಿಳಿಯುವುದು ॥

'ಜನಪ, ಕೇಳೈ! ಧರೆಗೆ ಋತುಪ—
ರ್ಣನು ಮಹಾರಾಜೇಂದ್ರ ಮೇಣಾ
ತನ ಪುರವರಕೆ ತೆರಳಿ ಸೇವಿಸು ಆತನನು ನೀನು ॥
ನಿನಗೆ ಮಂಗಳ ಕೋಟಿ ಮಸಗಲಿ'
ಎನುತ ಕರ್ಕೋಟಕನು ನಳನೃಪ
ಗಿನಿತು ಪೇಳುತ ಮಾಯವಾದನು ರಾಯನೆದುರಿನಲಿ ॥

## XXXII. ವಾಲ್ಮೀಕಿ.

ದೇವಿ! ಕೇಳು ಕಿರಾತನೋರ್ವ ಮ
ಹಾ ವಿಪಿನದೊಳು ಚೋರವೃತ್ತಿಯೊ
ಳಾವಗಂ ಪಥಿಕರ ವಿಘಾತಿಸಿ, ತಂದು ದ್ರವ್ಯಗಳ ॥
ಕೈವಿಡಿದ ಸತಿಸುತಹಿತಾದ್ಯರ
ನೋವಿ ರಕ್ಷಿಸುತಿರಲು, ಪದವಿಡಿ
ದಾವನಕೆ ನಡೆತಂದು ನಿಂದರು ಸಪ್ತಋಷಿವರರು ॥

ಕಂಡು ಘೋರ ಕಿರಾತನುರು ಕೋ-
ದಂಡಕಂಬಂ ಪೂಡಿ, ಕಂಗಳು
ಕೆಂಡ ಮುದುರಲು, ಹೂಂಕರಿಸುತಾರ್ಭಟಿಸಿ ಗರ್ಜಿಸಲು ।
ಲಂಡನಿವನೆಂದೆನುತ, ವಸ್ತ್ರಕ
ಮಂಡಲಂಗಳ ಬಿಸುಡೆ, ಸರ್ವವ
ಕೊಂಡು ಪೋಗುತ್ತಿರಲು ಕರೆದಿಂತೆಂದರನುನಯದಿ ॥

ಎಲೆ ಕಿರಾತವರೇಣ್ಯ! ಸುಜನಾ
ವಳಿಯ ಬಡಿದಪಹರಿಸಿ ನೀ ಮಿಗೆ
ಗಳಿಸಿದರ್ಥವನುಂಬ ಜನರೀ ಸುಕೃತ ದುಷ್ಕೃತದ ।
ಫಲಕೆ ಬಹರೋ ಬಾರರೋ ಇದ
ತಿಳಿದು ಬಾ ಹೋಗೆನಲು, ತನ್ನಯ
ಬಳಗವಿದ್ದೆಡೆಗೈದು ಕೇಳ್ದನು ಮನದ ಸಂಶಯವ ॥

ಕೇಳಿರೈ ನಾನೀ ವನದಿ ಬಿ
ಲ್ಲಾಳುತನದಿಂ ಸಕಲ ಸುಜನರು
ಗೋಳಿಡಲು ತಂದರ್ಥದಿಂ ಬದುಕುವರು ನೀವೆಲ್ಲ ॥
ಮೇಲೆ ಬಹ ಬಹು ಪಾಪಪುಣ್ಯಕೆ
ಪಾಲು ಬಹಿರೋ ಬಾರಿರೋ ಎನೆ
ಲಾಲಯಿಸಿ ಕೇಳ್ದಾಸುತಾದ್ಯರು ಪೇಳ್ದರುತ್ತರವ ॥

ಉದರಪೋಷಣೆಗಾಗಿ ನೀ ಪೇ
ಳಿದುದನೆಲ್ಲವ ಮಾಡಿ ಕರಕ
ಷ್ಟದಲಿ ಕಾಲವ ಕಳೆವೆವೆಮಗೀ ಸುಕೃತ ದುಷ್ಕೃತದ ॥
ಪದವಿಯೆಲ್ಲಿಯದೆನಲು ಭಯದಿಂ
ಕದಲಿ, ಮಗುಳೈತಂದು ಋಷಿಗಳ
ಪದಕೆ ವಂದಿಸಿ ನಿಂದು ಬಿನ್ನೈಸಿದನು ಕೈಮುಗಿದು ॥

ಮುನಿವರೇಣ್ಯರೆ! ಕೇಳಿ ತನ್ನಯ
ಧನದಿ ಬಾಳ್ವೆವು; ಸೇವಕತ್ವದಿ
ತನುವ ಹೊರೆವೆವು; ಪಾಪಪುಣ್ಯಗಳಿಲ್ಲ ತಮಗೆನುತ ॥
ಕನಲಿ ನುಡಿದರು. ಮುಂದೆ ಗತಿಯೇ
ನೆನಗೆನಲು ದುರಿತೌಘವಿಧ್ವಂ
ಸನಮೆನುತ್ತುಪದೇಶಗೈದರು ರಾಮಮಂತ್ರವನು ॥

ಆ ಮಹಾಮಂತ್ರವನು ಜಪಿಸುತ
ಭೂಮಿಯಲಿ ಕುಳ್ಳಿರೆ ಕಿರಾತ
ಗ್ರಾಮಣಿಯ ಸರ್ವಾಂಗವನು ಮುಸುಕಿದುದು ವಲ್ಮೀಕ ॥
ಹೈಮವತಿ! ಕೇಳ್ ಬಹುದಿನಕೆ ಬಂ
ದಾ ಮುನಿಪರಾ ವಿಪಿನಮಧ್ಯದಿ
ರಾಮನಾಮಧ್ವನಿಯನಾಲಿಸಿ ನಿಂದರಕ್ಕಜದಿ ॥

ಮುದವಡುತ ತಮ್ಮಯ ಕಮಂಡಲ
ದುದಕದಿಂ ಪುತ್ತವನು ಕರಗಿಸಿ
ಪದುಳದಿಂ ಪೊರೆವೆಗೆಯೆ ಕಮಲಜನಲ್ಲಿಗೈತಂದು ॥
ಮೊದಲ ಜನ್ಮವ ಬಿಡಿಸಿ ಮುನಿವ
ರ್ಗದಲಿ ಜತೆಗೈದು ವರ ರಾಮಾ
ಭ್ಯುದಯ ಚಾರಿತ್ರವನು ರಚಿಸೆಂದಡದರ್ದನಂಬರವ ॥

## XXXIII. ವಿಶ್ವರೂಪಪ್ರದರ್ಶನ.

ಸೂ। ಅವಧಿ ಸವೆದುದು; ಪಾಂಡವರು ನಿ
ನ್ನವರು; ವನವಾಸದಲಿ ನವೆದರು;
ಭುವನದರ್ಧವನೀವುದೆಂದಸುರಾರಿ ಸೂಚಿಸಿದಾ ॥

'ಕರೆದು ಮೂರಡಿ ನೆಲನ ಧಾರೆಯ-
ನೆರೆದ ಬಲಿ ತಳಕಿಳಿದ; ನನ್ನೀ
ಧರೆಯೊಳೈದೂರುಗಳ ಇತ್ತೆನಗಾವ ಪದವಿಹುದೊ?
ಪರಮಪುರುಷನು ನೀನು! ನಿನಗಾಂ
ಶರಣು ಹೊಕ್ಕೆನು; ಬಂದ ಪಥದಲಿ
ಮರಳಿ ಬಿಜಯಂಗೈವುದೆ'ಂದನು ನಗುತ ಕುರುರಾಯಾ ॥

'ನೆಲನೊಳರ್ಧವನೀವುದಿರಲೀ
ಸ್ಥಳವನೈದನು ಮುನ್ನ ಕೊಡೆ; ಎ
ನ್ನಿಳೆಗೆ ಪಾದವ ಮೆಟ್ಟಲೀಯೆ; ಅದೇಕೆ ಕೈವಾರಾ? ॥
ನೆಲನ ಕಡೆಯಲಿ ಮುಳ್ಳು ಮೊನೆಯು-
ತ್ತಳಿಪ ಧರಣಿಯನಿತ್ತೆನಾದರೆ
ಬಳಿಕ ನೀ ನಗು! ಹೋಗು ಕದನಕೆ ಕೊಂಡು ಬಾ'ಯೆಂದ ॥

'ದನವ ಕಾದುದು ತೀರ್ದುದೇ? ಬನ
ಬನಕೆ ಪೋದುದು ಕಡೆಯನೈದಿತೆ?
ಮನೆಮನೆಯ ಪಾಲ್ಮೊಸರ ಕದ್ದುಣ್ಬುದಕೆ ಕೊನೆಯಾಯ್ತೆ? ॥
ವನಧಿಯನೆ ಎಡೆಗೊಂಡು ನಡುಹಾ
ವಿನಲಿ ಹಕ್ಕೆಯ ಬಿಸುಟು, ನಮ್ಮೊಳು
ಮನಕತವನೀ ತಿಳುಹಲೋಸುಗ ಬಹರೆ?' ಕೇಳೆಂದ ॥

ಮುನಿದು ದುರ್ಯೋಧನನು ದುಃಶಾ
ಸನನು ಕೆಲದರನುನೆಯೊಳಾಲೋ
ಚನೆಯ ಮಾಡಿದರಂದು ಸೌಬಲ ಕರ್ಣರೊಡಗೂಡಿ ॥
'ದನುಜವೈರಿ ಕುಮಂತ್ರದಲಿ ಬೊ
ಪ್ಪನೊಳು ಖಾತಿಯನಿಕ್ಕಿದನು; ಕೈ
ಮನದ ಕಲಿಗಳು ಕಟ್ಟಿ ಕೃಷ್ಣನ!' ಎಂದು ಗುಜುಗುಜಿಸೆ ॥

'ನೊರಜು ಹೊಕ್ಕರೆ, ಕಲಕುವುದೆ ಸಾ
ಗರದ ಜಲ? ನೊಣವೆರಗಿದರೆ, ಕುಲ
ಗಿರಿಗಳಲ್ಲಾಡುವುವೆ? ಕೇಳ್ ಧೃತರಾಷ್ಟ್ರ ಭೂಪತಿಯೆ! ॥
ತೆರಳಗುಡುವನೆ ಕೊಬ್ಬಿದೊಳ್ಳೆಯ
ಮರಿಯ ಗರುಡನು? ನಿನ್ನ ಮಕ್ಕಳ
ದುರುಳತನಕಂಜುವನೆ ಮುರರಿಪು?' ಎಂದನಾ ವಿದುರ ॥

ವಿದುರನಿಂತಿಂತೆನಲು,— ಮಿಂಚಿನ
ಹೊದರು ಹುರಿಗೊಂಡಂತೆ, ರವಿಶತ
ವುದುರಿದುವು ಮೈಮುರಿದು ಸಿಂದೆಡೆ ದೇವನಂಗದಲಿ ॥
ಹೊದೆದುದಾಸ್ಥಾನವನು ಘನತೇ-
ಜದ ಲಹರಿ ಮಿಗಿಲಾಗೆ, ಹರಿ ತೋ
ರಿದನು ನಿರುಪಮವಿಶ್ವರೂಪವನಾ ಮಹಾಸಭೆಗೆ ॥

## XXXIV. ಸೀತೆಯ ವನವಾಸ.

ಅರಸ ಕೇಳಲ್ಲಿದ್ದ ಪಕ್ಷಿಮೃಗ ಜಂತುಗಳ್ ।
ಧರಣಿಸುತೆಯಂ ಬಳಸಿ ನಿಂದು, ಮೈಯುಡುಗಿ, ಜೋ ।
ಲ್ವಿರದೆ ಕಂಬನಿಗರೆದು, ನಿಜವೈರಮಂ ಮರೆದು, ಪುಲ್
ಮೇವುಗಳನೆ ತೊರೆದು ॥

ಕೊರಗುತಿದ್ದುವು ಕೂಡೆ. ವೃಕ್ಷಲತೆಗಳು ಬಾಡಿ ।
ಸೊರಗುತಿದ್ದುವು. ಶೋಕಭಾರದಿಂ ಕಲ್ಲುಗಳ್ ।
ಕರಗುತಿದ್ದುವು. ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೆ? ॥

ಮೊರೆಯಲೊಲ್ಲವು ತುಂಬಿ, ಕುಣಿಯಲೊಲ್ಲವು ನವಿಲ್ ।
ಬಿರೆಯಲೊಲ್ಲವು ಕೋಕಿ, ನಡೆಯಲೊಲ್ಲವು ಹಂಸೆ, ।
ಕರೆಯಲೊಲ್ಲವು ಪಿಕಂ, ನುಡಿಯಲೊಲ್ಲವು ಶುಕಂ ನಲಿಯಲೊಲ್ಲವು
ಚಕೋರಿ ॥

ಸೆರೆಯಲೊಲ್ಲವು ಹರಿಣಿ, ಒಲೆಯಲೊಲ್ಲವು ಕರಿಣಿ, ।
ಪೊರೆಯಲೊಲ್ಲವು ಚಮರಿ, ಮೊರೆಯಲೊಲ್ಲವು ಸಿಂಗ ।
ಮರರೆ! ಜಾನಕಿಯ ಶೋಕಂ ತಮ್ಮದೆಂದಾಕೆಯಂಗಮಂ ನೋಡಿ ನೋಡಿ ॥

ಬೀಸಿದವು ಬಾಲದೊಳ್ ಚಮರಿಗಳ್ ಚಮರಮಂ, ।
ಹಾಸಿದವು ಕರಿಗಳೆಳೆದಳಿರ ಮೃದುತಲ್ಪಮಂ, ।
ಸೂಸಿದವು ಸಾರಂಗಗಳ್ ತಮ್ಮ ಗರಿಗಳಂ ತೋದು ತಂದಂಬುಗಳನು ॥
ಆ ಸಿರಿಮೊಗಕ್ಕೆ ಬಿಸಿಲಾಗದಂತಾಗಸದೊ ।
ಳೋಸರಿಸದಂಚೆಗಳ್ ರೆಕ್ಕೆಯನಗಲ್ಚಿ ನೆಳ ।
ಲಾಶೆಗೈದವು ರಾಘವನ ರಾಣಿ ದುಃಖಸಂತಪ್ತೆಯಾಗಿರುತಿರಲ್ಕೆ ॥

ಸುರನದಿಯ ತೆರೆತೆರೆಯ ನಡನಡುವೆ ಬಿದ್ದೆದ್ದು ।
ಬರಲಾರದಿರ್ದೊಡಂ, ಮತ್ತೆ ಗಂಗೆಯೊಳರಳಿ ।
ದರವಿಂದ ಗಂಧಗಳ ಭಾರಮಂ ಪೊರಲಾರದಿರ್ದೊಡಂ, ಧರಣಿಸುತೆಯ ॥
ಪರಿತಾಪಮಂ ತವಿಸದಿರಬಾರದೆಂದು, ತರ-।
ಹರದೊಳೊಯ್ಯೊಯ್ಯನೈತಂದು ಬೀಸಿತು ಸುಖ ।
ಸ್ಪರುಶವಾತಂ! ಜಗದೊಳುಪಕಾರಿಯಾದವಂ ತನ್ನ ನೋವಂ ನೋಳ್ಪನೆ? ॥

ಪೃಥಿವಿಯಾತ್ಮಜೆ ಬಳಿಕ ಚೇತರಿಸಿ, ತನಗಿನ್ನು ।
ಪಥಮಾವುದೆಂದು ದೆಸೆದೆಸೆಗಳಂ ನೋಡಿ, ಸಲೆ ।
ಶಿಥಿಲಮಾದವಯವದ, ಧೂಳಿಡಿದ ಮೈಯ, ಬಿಡುಮುಡಿಯ
ವಿಕೃತಿಯನೆಣಿಸದೆ ॥
ಮಿಥಿಲೇಂದ್ರ ವಂಶದೊಳ್ ಜನಿಸಿ, ರಘುಕುಲದಶ-।
ರಥನೃಪನ ಸೊಸೆಯಾಗಿ, ತನಗೆ ಕಟ್ಟಡವಿಯೊಳ್ ।
ವ್ಯಥಿಸುವಂತಾಯ್ತಕಟ, ವಿಧಿ! ಯೆಂದು ಹಲಬಿದಳ್ ಕಲ್ಮರಂ
ಕರಗುವಂತೆ ॥

## XXXV. ಭ್ರಾತೃಪ್ರೇಮ.

**ಸೂ॥** ‘ಎತ್ತ ಪೋದನು, ತಾಯೆ! ನನ್ನಣ್ಣ ರಘುರಾಮು?
ಎತ್ತ ಪೋದನು ವೀರ ಸೌಮಿತ್ರಿ? ಭೂಜಾತೆ
ಯೆತ್ತ ಪೋದಳು? ಹೇಳು! ಬಿತ್ತರಿಸು ಕೋಸಲದ
ದುಸ್ಥಿತಿಯನೆ’ಂದ ಭರತ ॥

**ಕೈಕೇಯಿ**—‘ಕಂದ, ಕೇಳೆನ್ನ! ನಿನ್ನಣ್ಣನಿಗೆ ಪಟ್ಟವನು
ತಂದೆ ಕಟ್ಟಲ್ಕೆಂದು ಸರ್ವಸಿದ್ಧಿಯ ಮಾಡ
ಲಂದು ನಾ ಪೋಗದಿರೆ, ನಿನ್ನ ಪಿತನೆನ್ನ ಬಳಿಗೈತಂದು
ಕರೆದೊಯ್ಯಲು ॥

ಬಂದಾಗ, ನಿನಗಾಗಿ ನಾನದಕ್ಕೊಪ್ಪದಿರೆ,
ಹಿಂದೆ ಎನಗವನು ಕೊಟ್ಟೆರಡು ವರಗಳ ಕೇಳು
ತೆಂದೆ ಪಟ್ಟವ ನಿನಗೆ ಕಟ್ಟಲ್ಕೆ, ರಾಮನಂ ಕಳುಹಲ್ಕೆ
ವನವಾಸಕೆ ॥

‘ಮಗನೆ ಕೇಳ್ ನಿನ್ನ ಪಿತನೆನ್ನ ವಚನವ ಕೇಳಿ
ಮಿಗೆ ಶೋಕದಿಂದ ಬಿರುಗಾಳಿ ಪೊಡೆಯಲ್ಕೆ ಮರ
ಮಗುಚಿ ಧರೆಗೊರಗುವಂದದಿ ಬಿದ್ದನುರ್ವಿಯೊಳು
ಹಮ್ಮೈಸಿ ಮೂರ್ಛೆಯಿಂದಾ ॥

ಬಗೆಯ ತಿಳಿಯಲ್ಕೆ ರಘುರಾಮು ಪಿತನೆಡೆಗೈದು
ಜಗಳವೇನೆಂದು ಕೇಳಲ್ಕೆ ವರಗಳ ಪೇಳೆ,
ನಗುತ ಪಿತನಂಘ್ರಿಗೆರಗುತ ವರವ ಸಲಿಸಲ್ಕೆ ನಿನ್ನಣ್ಣ ಪೋದ
ವನಕೆ’ ॥

‘ಕಳುಹಿದ್ಯೆ ಬನಕೆ’ಂದು ಭರತನತಿಕೋಪದಿಂ
‘ದಿಳಿಸಿದ್ಯೆ ಬಹುವಿಧದ ನರಕದೊಳ್ ರವಿಕುಲವ.
ಕಲಿಸಿದ್ಯೆ ಕಲಿಮಲವ ಕುಲಕೆಮ್ಮ. ನಿರ್ಧೂತೆ! ಭೀಕರದ
ಕಾಂತಾರದಿ ।

ಬಳಸಿದ್ಯೆ ಶ್ರೀರಾಮ, ಸೌಮಿತ್ರಿ, ಸೀತೆಯರ
ನೆಳಸಿದ್ಯೆ ವೈರವನ್ನೆನ್ನ ಸಹಜಾತನೊಳು
ನಿಲಬೇಡ ಕಣ್ಮುಂದೆ ನನಗೆ'ಂದು ಗರ್ಜಿಸಿದ ಕೈಕೇಯ
ಪುತ್ರನಂದು ॥

ಮಂದಿಮಾರ್ಬಲಸಹಿತ ಭರತನು ಬಳಿಕದೆ ತಾ
ಯಂದಿರೊಡಗೂಡಿ, ಗುರುಸಚಿವರೊಡಗೂಡಿ ಮೇಣ್
ಮಂದಾಕಿನಿಯ ಸೇರಿ, ನಾವದೊಳ್ ಗಂಗೆಯನು ದಾಟಿ
ನಿರ್ಮಲ ಜಲದೊಳು ॥

ಮಿಂದು, ಘನಘೋರ ಕಾನನ ಸಂದು, ಶ್ರೀರಾಮ
ಚಂದಿರನ ಕಂಡು, ಕಡುನೊಂದು ಬಹುಭಕ್ತಿಯಿಂ
ವಂದಿಸುತ ಪೇಳಿದನು 'ಹಿಂದಿರುಗು ರಘುರಾಮ! ತಪ್ಪಿ
ದೆವು; ಮನ್ನಿಸೆ'ಂದು ॥

ಆಗ ಶ್ರೀರಾಮನು—

'ಭ್ರಾತೃ ಕೇಳೆಲೆ! ಭರತ, ಶೋಕಿಸದಿರ್ಯೆ ಶ್ವೇತ
ಛತ್ರಛಾಯೆಯು ನಿನಗೆ, ವೃಕ್ಷದಾ ನೆರಳೆನಗೆ;
ಶತ್ರುಘ್ನ ಬೆಂಬಲನು ನಿನಗೆ; ಸೌಮಿತ್ರಿ ಒತ್ತಾಸೆ ಎನ
ಗಿರಲು ಕೇಳು ॥

ಭ್ರಾತೃಪ್ರೇಮಕೆ ನಿನ್ನ ಎಣೆಯುಂಟೆ? ನೀ ಧನ್ಯ!
ಧಾತ್ರಿಯೊಳ್ ಪಿತೃವಾಕ್ಯವೆ ಶ್ರೇಷ್ಠ ಪುತ್ರಂಗೆ.
ಮಾತೃಸೇವಾನಿರತನಾಗಿ ಬಾಳ್ಯೆ ಭರತ ಇಕ್ಷ್ವಾಕು
ವಂಶದರಸ ॥

'ಮನಬಂದ ತೆರದಿ ನೀ ಮಾಯಾಪ್ರಪಂಚದಲಿ
ಕ್ಷಣಿಕಸುಖಕೆಳಸಿ ಬಲು ತಿರುಗಿ ಬೆಂಡಾಗದಿರು.
ಜನನ ಮರಣಗಳೆಲ್ಲ ನಿಲ್ಲುವಂತಹುದಲ್ಲ, ಕಾನನದ
ಬೆಳ್ದಿಂಗಳು ॥

ತನುಧನವು ಸ್ಥಿರವಲ್ಲ, ನೀರ್ಗುಳ್ಳೆಯಂತಿಕ್ಕು.
ಮನುಜನೊಬ್ಬನೆ ಇಹಕೆ ಬರುತಿಹನು, ಪೋಗುವನು.
ಜನಕನಾಜ್ಞೆಯ ಸಲಿಸಿ ವನವಾಸವಂ ಮುಗಿಸಿ ಬಹೆನೆಂದ
ಲಕ್ಷ್ಮೀವರಂ ॥

ಭರತನದಕ್ಕೊಪ್ಪದಿರಲು ಶ್ರೀರಾಮನು

ಭರತ! ಸಚ್ಚರಿತ! ವಿದ್ಯಾಭರಿತ! ಗುಣಗಾತ್ರ!
ನಿರುತ ನೀ ಧರ್ಮದಿಂ ನ್ಯಾಯದಿಂ ನಾ ಮರಳಿ
ಬರುವ ಪರಿಯಂತ ಭಾರತವಾಳುತಿರು ಸಚಿವ ಮಂತ್ರಿಗಳ
ನೊಡಗೂಡುತ ॥

ತರಣಿ ನಿಸ್ತೇಜವಾಗಲಿ! ಚಂದ್ರಕಿರಣಗಳು
ಉರಿಯಾಗಿರಲಿ! ಶರಧಿ ಬರಿದಾಗಿ ಬತ್ತಿರಲಿ!
ವರಪ್ರತಿಜ್ಞೆಗೆ ಭಂಗಬರುವಂತೆ ಸರ್ವಥಾ ಚರಿಸುವವನಲ್ಲ
ಕಾಣಾ ॥

**ಭರತ**:— ಅಣ್ಣ! ನಾನಿನ್ನನುಜ್ಞೆಗೆ ಶಿರವ ಬಾಗಿಪೆಂ;
ಇನ್ನು ನೀ ಬಾರದಿರೆ ಪೋಗೆ ಕೋಸಲಕೆ. ನಾ
ನಿನ್ನ ಪಾವನ ನಾಮಪಾನದಿಂದನವರತ ಇರುವೆ ನಂದಿಗ್ರಾಮದಿ ॥
ನಿನ್ನ ಪೆಸರಿಂ ರಾಜ್ಯಭಾರಕಾರ್ಯಕ್ರಮವ
ಸನ್ನುತದಿ ಪದಿನಾಲ್ಕು ವರುಷ ನಡೆಸುತ ಬರುವೆ;
ಅನ್ನೆಗಂ ಬಾರದಿರ್ದೊಡೆ ತನುವನಗ್ನಿಯಲಿ ಹುಯ್ಯುವೆನು.
ಎನ್ನಾಣೆಯು ॥